# ' ಲೋಚನ '

## ಸಂಪಾದಕ ಮಂಡಲಿ

ಪ್ರೊ॥ ಎಂ. ವಿ. ಸೀತಾರಾಮಯ್ಯ (ಅಧ್ಯಕ್ಷರು), ಪ್ರೊ॥ ಜಿ. ವೆಂಕಟಸುಬ್ಬಯ್ಯ (ಪ್ರಧಾನ ಸಂಪಾದಕರು), ಟಿ. ಕೇಶವ ಭಟ್ಟ (ಸಂಪಾದಕರು), ಎನ್. ಎಸ್. ರಾಮಸ್ವಾಮಿ ಅಯ್ಯರ್ (ಸಹಾಯಕ ಸಂಪಾದಕರು).

ಡಾ॥ ಪಿ. ವಿ. ನಾರಾಯಣ, ಬೆಂಗಳೂರು; ಡಾ॥ ಎಂ. ಚಿದಾನಂದಮೂರ್ತಿ, ಬೆಂಗಳೂರು; ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯ, ಬೆಂಗಳೂರು; ಕೆ. ಆರ್. ಗಣೇಶ, ಬೆಂಗಳೂರು; ಡಾ॥ ಆರ್. ಶೇಷಶಾಸ್ತ್ರಿ, ಅನಂತಪುರ; ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿ, ಮೈಸೂರು; ಎಂ. ಬಸವಾರಾಧ್ಯ, ಮೈಸೂರು; ಎಸ್. ಪಿ. ಪಾಟೀಲ, ಧಾರವಾಡ; ಡಾ॥ ಶ್ರೀನಿವಾಸ ಹಾವನೂರ, ಮುಂಬಯಿ; ಡಾ॥ ಶ್ರೀಕೃಷ್ಣ ಭಟ್ ಅರ್ತಿಕಜೆ, ಮದರಾಸು; ಡಾ॥ ಬಿ. ರಾಮಚಂದ್ರರಾವ್, ಹೈದರಾಬಾದು; ಅನಂತಪದ್ಮನಾಭರಾವ್, ಬೆಂಗಳೂರು; ಡಾ॥ ಕೆ. ಕೆ. ಗೌಡ, ಮದರಾಸು; ಎಸ್. ಶಿವಣ್ಣ, ಬೆಂಗಳೂರು; ಪ್ರೊ॥ ವಸಂತ ಕುಷ್ಟಗಿ, ಗುಲಬರ್ಗಾ.

## ಲೇಖನಗಳು–ಟಿಪ್ಪಣಿಗಳು

ಸಂಶೋಧನಾತ್ಮಕ ಪಾಂಡಿತ್ಯಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು – ಇವುಗಳ ಮೇಲಣ ವಿಮರ್ಶೆಗಳು, ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ ಇವುಗಳಿಗೆ ಸಂಬಂಧಿಸಿದ ಟೀಕೆ ಟಿಪ್ಪಣಿಗಳು – ಇವುಗಳಿಗೆ 'ಲೋಚನ' ಮೀಸಲಾಗಿದೆ.

ಯಾವದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬುದಾರರು; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

## ಲೇಖನಗಳಿಗೆ ಆಹ್ವಾನ

ಮೇಲ್ಕಂಡ ವಾಕ್ಯವೃಂದದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾದ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. 'ಲೋಚನ'ದ ಗಾತ್ರ ಪರಿಮಿತವಾದದ್ದರಿಂದ ಲೇಖನಗಳು ಅಚ್ಚಿನ 6–8 ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ. ಟಿಪ್ಪಣಿಗಳು 1–2 ಪುಟಗಳ ಪರಿಮಿತಿಯಲ್ಲಿರಬಹುದು. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ-ಲೇಖನಾಧಾರ ವಿವರಗಳನ್ನು (Bibliography) ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ಕೋರಿಕೆ.

## ವಿನಿಮಯ ಪತ್ರಿಕೆಗಳು

೧. ಸೋವಿಯತ್ ದೇಶ (ಮದರಾಸು), ೨. ಲಹರಿ (ಮದರಾಸು), ೩. ಅಂಕಣ (ಬೆಂಗಳೂರು), ೪. ಗ್ರಂಥಲೋಕ (ಮೈಸೂರು), ೫. ಅನ್ವೇಷಣೆ (ಬೆಂಗಳೂರು), ೬. ಚಿನ್ನುಡಿ (ಶಿವಮೊಗ್ಗ), ೭. ತರಳಬಾಳು (ಸಿರಿಗೆರೆ), ೮. ಸಾಧನೆ (ಬೆಂಗಳೂರು), ೯-೧೧. ಪ್ರಬುದ್ಧ ಕರ್ಣಾಟಕ, ಮಾನವಿಕ ಕರ್ಣಾಟಕ, ವಿಜ್ಞಾನ ಕರ್ಣಾಟಕ (ಮೈಸೂರು), ೧೨. ಸುಗುಣಮಾಲಾ (ಉಡುಪಿ), ೧೩. ಗ್ರಾಮ ಕ್ಷೇಮ (ಆನೇಕಲ್).

**ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಲೇಖಕರು ಕಳಿಸಬೇಕು.**

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ; ಆದರೆ ಕಳಿಸಿದರೆ, 'ಸ್ವೀಕಾರ' ಭಾಗದಲ್ಲಿ ಗಮನಿಸಲಾಗುವುದು. ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

## ತಿಮ್ಮಪ್ಪದಾಸರ
# ಶ್ರೀ ಕೃಷ್ಣಬಾಲಲೀಲೆ



**ಸಂಪಾದಕ : ಪ್ರೊ॥ ಎಂ. ವಿ. ಸೀತಾರಾಮಯ್ಯ**

ಶ್ರೀಮದ್ಭಾಗವತದ ದಶಮ ಸ್ಕಂಧವನ್ನು ಅನುಸರಿಸಿ ಸ್ವತಂತ್ರ ಕೃತಿ ಎನ್ನುವ ಮಟ್ಟಿಗೆ ರಾಗ ತಾಳ ಸಹಿತವಾದ ಕೀರ್ತನೆಗಳ ರೂಪದಲ್ಲಿ ಬರೆದಿರುವ ಬೃಹತ್ಕೃತಿ. (ಸಂಪಾದಕರ ಕವಿಕೃತಿವಿಷಯಕ ಪೀಠಿಕೆ, ಯಥೋಚಿತ ಟಿಪ್ಪಣಿಗಳೂ ಇವೆ.)

ಇದು ಎರಡು ಸಂಪುಟಗಳಲ್ಲಿ ಪ್ರಕಟವಾಗುವುದು. ಡೆಮಿ 8/1 ಆಕಾರದಲ್ಲಿ ಮುದ್ರಣವಾಗುವ ಪ್ರತಿ ಸಂಪುಟವೂ ಸುಮಾರು 800 ಪುಟಗಳಷ್ಟಿರುತ್ತದೆ.

ಪ್ರತಿ ಸಂಪುಟದ ಬೆಲೆ ರೂ. 75-00.

ಪ್ರತಿಷ್ಠಾನದ ಸದಸ್ಯರಿಗೆ ಶೇ. 50 ರಿಯಾಯಿತಿ ಉಂಟು.

ಮೊದಲ ಸಂಪುಟ ಈಗ ಬಿಡುಗಡೆಯಾಗಿ, ಪ್ರತಿಗಳು ಮಾರಾಟಕ್ಕಿವೆ.

**ಇದೇ 1988ರ ಫೆಬ್ರುವರಿ 29 ರೊಳಗೆ ಮುಂಗಡವಾಗಿ ಹಣ ಕಳಿಸಿಕೊಡುವ ಪ್ರತಿಷ್ಠಾನದ ಸದಸ್ಯರಿಗೆ, ಎರಡು ಸಂಪುಟಗಳನ್ನೂ ಒಟ್ಟಿಗೆ ಕೊಂಡುಕೊಂಡರೆ, ಎರಡೂ ಸಂಪುಟಗಳನ್ನು 60 ರೂ.ಗಳಿಗೆ ಕೊಡಲಾಗುವುದು ; ಇತರರಿಗೆ 80 ರೂ. ಗಳಿಗೆ ಕೊಡಲಾಗುವುದು.**

ಅಂಚೆ ವೆಚ್ಚ ಪ್ರತ್ಯೇಕ.

---

['ಶ್ರೀ ಕೃಷ್ಣಬಾಲಲೀಲೆ'ಯನ್ನು (ಮೊದಲ ಸಂಪುಟ) 1986ರಲ್ಲಿ ಗ್ರಂಥ ಸಂಪಾದನ ಪ್ರಕಾರದಲ್ಲಿ ಪ್ರಕಟವಾದ ಪುಸ್ತಕಗಳಲ್ಲಿ ಉತ್ತಮವಾದುದೆಂದು ಪರಿಗಣಿಸಿ 3000 ರೂ. ಗಳ ಬಹುಮಾನವನ್ನು ರಾಜ್ಯ ಸಾಹಿತ್ಯ ಅಕಾಡೆಮಿ ನೀಡಿದೆ.]

For Distribution among Members only

# LOCHANA

[Half-yearly Journal Published by B.M.Sri Memorial Foundation, 54, 3rd Cross, Gavipuram Extn., Bangalore-19]

*Chief Editor*: **Prof. G. Venkatasubbiah**
*Editor*: **Prof. (Vidvan) T. Keshava Bhat**

*Vol. 5* *December 1987* *No. 2*

## CONTENTS

ಸದಸ್ಯರಲ್ಲಿ ಮಾತ್ರ ವಿತರಣೆಗಾಗಿ

# ಲೋಚನ


ಷಾಣ್ಮಾಸಿಕ ವಿದ್ವತ್ ಪತ್ರಿಕೆ

[ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ೫೪, ೩ನೇ ಅಡ್ಡಬೀದಿ, ಗವಿಪುರಂ, ವಿಸ್ತರಣ, ಬೆಂ–೧೯]

ಪ್ರಧಾನ ಸಂಪಾದಕ : ಪ್ರೊ॥ ಜಿ. ವೆಂಕಟಸುಬ್ಬಯ್ಯ

ಸಂಪಾದಕ : ಪ್ರೊ॥ ವಿದ್ವಾನ್ ಟಿ. ಕೇಶವಭಟ್ಟ

ಸಂಪುಟ ೫ ಡಿಸೆಂಬರ್ ೧೯೮೭ ಸಂಚಿಕೆ ೨


## ಪರಿವಿಡಿ

---

# ಕನ್ನಡ ನಿಘಂಟು ರಚನೆಯಲ್ಲಿ
# ಶಬ್ದಾರ್ಥ ವಿಚಾರದ ಕೆಲವಂಶಗಳು

—ಡಾ॥ ಟಿ. ವಿ. ವೆಂಕಟಾಚಲ ಶಾಸ್ತ್ರೀ

೧

ನಿಘಂಟು ನಿರ್ಮಾಣ ಒಂದು ಖಚಿತ ವಿಜ್ಞಾನ. ಆದರೆ ವಿಜ್ಞಾನದಲ್ಲಿ ವಸ್ತು ಅಥವಾ ಘಟನೆಗೆ ಕಾರ್ಯಕಾರಣ ಸಂಬಂಧವನ್ನೂ ಪ್ರಯೋಗನಿಷ್ಪನ್ನವಾದ ಫಲಿತಗಳನ್ನೂ ನಿರ್ದುಷ್ಟವಾಗಿ ನಿರೂಪಿಸಲು ಸಾಧ್ಯವಾಗುವಂತೆ ನಿಘಂಟು ನಿರ್ಮಾಣದಲ್ಲಿ ಶಬ್ದಾರ್ಥವನ್ನು ನಿರೂಪಿಸುವುದು ಕಷ್ಟ. ಇದಕ್ಕೆ ಕಾರಣಗಳೂ ಸ್ಪಷ್ಟವಾಗಿಯೇ ಇವೆ. ಮೊದಲನೆಯದರಲ್ಲಿ ಭೌತರಚನೆಯೋ ರಾಸಾಯನಿಕ ಪ್ರಕ್ರಿಯೆಯಿಂದ ಜನ್ಯವಾಗುವ ರೂಪಾಂತರವೋ ಶಕ್ಯವಿರುತ್ತದೆ. ನಿಘಂಟುವಿನ ಮೂಲದ್ರವ್ಯವಾದ ಶಬ್ದದ ವಿಷಯದಲ್ಲಿ ಹೀಗೆ ಹೇಳುವುದಕ್ಕಾಗದು. ಶಬ್ದ ಒಂದು ಜೀವಂತ ನಿರ್ಮಾಣ, ಭಾವವಾಹಕ ಮಾಧ್ಯಮ. ಪರಂಪರೆ ವ್ಯಾಕರಣಗಳು ಅದರ ಅರ್ಥವನ್ನು ಗೊತ್ತುಮಾಡಿದ್ದರೂ, ಅವುಗಳೇ ಅದರ ಅರ್ಥಚ್ಛಾಯೆಗಳನ್ನೂ ಅರ್ಥಾಂತರಗಳನ್ನೂ ಒಪ್ಪಿಕೊಂಡಿರುತ್ತವೆ. ಅಷ್ಟೇ ಅಲ್ಲ, ಕೆಲವೊಮ್ಮೆ ವಿರುದ್ಧಾರ್ಥವನ್ನು ಸಹ ಮನ್ನಿಸಿರುತ್ತವೆ. ಏಕಕಾಲದಲ್ಲಿ ಶಬ್ದವೊಂದರ ಯಥಾರ್ಥ ವಿರುದ್ಧಾರ್ಥಗಳು ಒಂದು ಶಬ್ದಕ್ಕೆ ವರ್ತಿಸುವ ಸಂದರ್ಭಗಳು ವಿರಳವಾದರೂ ಅಸಂಭವ ಎನ್ನುವಂತಿಲ್ಲ. ಹೀಗಿರುವಾಗ, ಒಂದು ಶಬ್ದಕ್ಕೆ ಇನ್ನೊಂದು ಶಬ್ದವನ್ನು ಎದುರು ನಿಲ್ಲಿಸಿ, ಒಂದರ ಅರ್ಥವನ್ನೇ ಆ ಇನ್ನೊಂದು ಯಥಾವತ್ತಾಗಿ ಸೂಚಿಸುತ್ತದೆ ಎನ್ನುವುದು ಎಷ್ಟರ ಮಟ್ಟಿಗೆ ಸಂಗತ ಎಂಬುದನ್ನು ಪರಿಭಾವಿಸಬೇಕು. ಅತ್ಯಂತ ನಿಕಟವೆಂದು ಗ್ರಹಿಸಿದ ಯಾವುದೇ ಪ್ರತಿಶಬ್ದವೂ ಈ ದೃಷ್ಟಿಯಿಂದ ಯಶಸ್ವಿಯಾಗಲಾರದು. ಶಬ್ದಗಳ ಮಟ್ಟಿಗೆ ಅದೇ ಭಾಷೆಯಲ್ಲಿ ಎದುರಾಗುವ ತೊಡಕು, ಎರಡು ಭಿನ್ನಭಾಷೆಗಳ ನಡುವೆ ಬಹುಶಃ ಅಷ್ಟು ಎದುರಾಗಲಾರದು. ಸಂಸ್ಕೃತಿ ವಿಭಿನ್ನತೆಯಿದ್ದೂ ಭಾವಸಾಮ್ಯದ, ವಸ್ತುಸಾಮ್ಯದ ಪ್ರತಿಶಬ್ದಗಳ ಶ್ರೇಣಿಗಳು ಎರಡರಲ್ಲೂ ಇರುವುದು ಶಕ್ಯ ಎಂಬುದೇ ಇದಕ್ಕೆ ಕಾರಣ. ಇದು ಏನೇ ಇರಲಿ, ನಿಘಂಟುರಚನೆಯಲ್ಲಿ ಅರ್ಥಸೂಚನೆಗೆ ಪ್ರತಿಶಬ್ದವನ್ನಿಡುವ ಮಾರ್ಗವನ್ನು ಅನುಸರಿಸದೆ ವಿಧಿಯಿಲ್ಲ.

ನಿಘಂಟು ರಚನೆಯಲ್ಲಿ ಪ್ರತಿಶಬ್ದನಿಧಾನವು ಒಡ್ಡಬಹುದಾದ ಸಮಸ್ಯೆಗಳನ್ನು, ವಕ್ತೃವಿನ ಭಾವವನ್ನು ಸಹಾನುಭೂತಿಯಿಂದ ತಿಳಿಯಲು ಶಕ್ತನಾಗಿರುವ ಶ್ರೋತೃ ತಾನೇ ಪರಿಹರಿಸಿಕೊಳ್ಳಬಲ್ಲನು. ಇಬ್ಬರ ನಡುವೆ ಮಾನವೀಯ ಸ್ವಭಾವದಲ್ಲಿ ಕೆಲವು ಸಮಾನಧರ್ಮಗಳಿರುವುದರಿಂದ ಇದು ಸಾಧ್ಯ. ಇದು ನಿಘಂಟುನಿರ್ಮಾಪಕ

ನಿಗಿರುವ ಒಂದು ವರದಾನ. ಹೀಗಿದ್ದೂ, ವಕ್ತೃವಿನ ಭಾವವೇ ಶ್ರೋತೃವಿನ ಭಾವ ವಾಯಿತೇ ? ಆಯಿತು ಅಥವಾ ಆಗಲಿಲ್ಲ ಎನ್ನುವುದನ್ನು ನಿಖರವಾಗಿ ನಿರೂಪಿಸಲು ನಮಗಿರುವ ಮಾನದಂಡಗಳೇನು ? ಇಲ್ಲಿ ಇನ್ನೂ ಗಹನವಾದ ಒಂದಂಶವೆಂದರೆ, ವಕ್ತೃವಿನ ಭಾವವನ್ನು ಅಭಿವ್ಯಕ್ತಿಸಿದ ಶಬ್ದ, ಯಥಾರ್ಥವಾಗಿ ಅದನ್ನು ಅಭಿವ್ಯಕ್ತಿಸಿತೇ ಎನ್ನುವುದು. ಸಂಕೀರ್ಣಸ್ವರೂಪದ ಕವಿಯು ಭಾವವನ್ನು ಅವನ ಕವಿತ್ವವೋ ಮತ್ತೆ ಯಾವುದಾದರೂ ಸಾಹಿತ್ಯರೂಪವೋ ಸುಸಮರ್ಥವಾಗಿ, ಯಥಾರ್ಥವಾಗಿ ಪ್ರತಿಬಿಂಬಿಸುವುದು ಎಷ್ಟರಮಟ್ಟಿಗೆ ಶಕ್ಯ ಎಂಬುದೂ ಆ ಪ್ರಕ್ರಿಯೆಯ ವಿವರಗಳೇನು ಎಂಬುದೂ ಕಾವ್ಯಮೀಮಾಂಸೆಯಲ್ಲಿ ಚರ್ಚಿತವಾಗಿರುವ ಸಂಗತಿ. ಇಲ್ಲಿ ಅದು ಅಪ್ರಸ್ತುತ. ವಕ್ತೃವೋ ಕವಿಯೋ ಬಳಸುವ, ವಸ್ತು ಅಥವಾ ಭಾವ ನಿರೂಪಣೆಗೆ ಮೂಲದ್ರವ್ಯವಾದ, ಶಬ್ದ ಹಾಗೂ ಆಯಾ ಭಾಷಿಕ ಪರಂಪರೆ ಒಪ್ಪಿರುವ ಅರ್ಥ, ಅರ್ಥಚ್ಛಾಯೆ, ಅರ್ಥಾಂತರಗಳ ವಿವರಣೆಯಲ್ಲಿ ತೊಡಗಿಸುವ ಪ್ರತಿಶಬ್ದ ಇವುಗಳ ಸಂಬಂಧವಾದ ಕೆಲವು ಸಂಗತಿಗಳನ್ನು ಗಮನಿಸುವುದಷ್ಟೇ ಮಾಡಬೇಕಾದ ಕೆಲಸ. ಒಂದು ದೃಷ್ಟಿಯಿಂದ ಯಾವುದೇ ಭಾಷೆಯಲ್ಲಿಯೂ ನಿಘಂಟು ರಚನೆಯಲ್ಲಿ ಈ ಸಂಬಂಧದ ಕಷ್ಟಸುಖಗಳು ಸಮಾನವಾದವು.

೨

'ಶಬ್ದ' ಎಂಬುದರ ವೈಯಾಕರಣ ಲಕ್ಷಣ ಏನೇ ಇರಲಿ, ಭಾವವಾಹಕ ಮಾಧ್ಯಮವಾದ ದ್ರವ್ಯ ವಿಶೇಷವಾಗಿ ಅದು ಜೀವಂತವಾದುದು, ಚಲನಶೀಲವಾದುದು. ಜೀವಂತವೂ ಚಲನಶೀಲವೂ ಆದುದನ್ನು ಹಿಡಿದಿಡುವುದು ಕಷ್ಟ. ಅಂತಹ ಪ್ರಯತ್ನದಿಂದ ಅದರ ಸ್ವರೂಪವೇ ಬದಲಾಗುತ್ತದೆ. ನಮ್ಮ ಒಬ್ಬ ಕನ್ನಡ ವೈಯಾಕರಣನು ಶಬ್ದೋತ್ಪತ್ತಿಯನ್ನು ಕುರಿತು ಹೇಳುವಾಗ, ಅದು ಉತ್ಪಾದನೆಯ ಪ್ರಕ್ರಿಯೆಯಲ್ಲಿ ದ್ರವ್ಯರೂಪವಾಗಿರುವುದೆಂದೂ ಆ ದ್ರವ್ಯವು ಬಿಳಿಯ ಬಣ್ಣದ್ದಾಗಿರುವುದೆಂದೂ, ತಿಳಿಸಿರುತ್ತಾನೆ. ಇದು ಶಬ್ದದ ಜೀವಂತ, ಚಲನಶೀಲ ಗುಣವನ್ನೂ ಶುದ್ಧ ಪಾರದರ್ಶಕ ಭಾವಲಕ್ಷಣವನ್ನೂ ಸೂಚಿಸುವಂತೆ ನನಗೆ ತೋರುತ್ತದೆ. ಶಬ್ದಕ್ಕೆ ದ್ರವ್ಯತ್ವ ಹೇಳಿರುವ ಇತರರೂ ಇದ್ದಾರೆ. ಈ ಕಾರಣದಿಂದಾಗಿಯೇ ಶಬ್ದಕ್ಕೆ ಅರ್ಥವೈವಿಧ್ಯವಿರುವಂತೆಯೇ ರೂಪವೈವಿಧ್ಯವೂ ಇರುತ್ತದೆ. ಇದನ್ನು ಇಲ್ಲಿ ವಿಸ್ತರಿಸಬೇಕಾಗಿಲ್ಲ.

ಒಂದು ಭಾಷೆಯಲ್ಲಿ ದೇಶ್ಯಶಬ್ದಗಳ ಮೂಲಧನವಿರುತ್ತದೆ ; ಎರವಲು ಪಡೆದ ಅನ್ಯದೇಶ್ಯಗಳಿರುತ್ತವೆ. ಇವುಗಳಿಗೆ ಅಂಗೀಕೃತ ಗ್ರಾಂಥಿಕ, ವ್ಯಾವಹಾರಿಕ ಹಾಗೂ ಗ್ರಾಮ್ಯರೂಪಗಳಿರುವುದನ್ನು ನಾವು ಕಾಣಬಹುದು. ಇವನ್ನೆಲ್ಲ ಯಥೋಚಿತವಾಗಿ ಸಂಗ್ರಹಿಸಿ, ಅಕಾರಾದಿಯಾಗಿ ಸಂಯೋಜಿಸಿ ಅವುಗಳೆಲ್ಲಕ್ಕೂ ಅರ್ಥ ಹೇಳುವುದು ನಿಘಂಟಿನ ಕೆಲಸ. ಇದು ನೆನಸಿದಷ್ಟು ಸುಲಭವಲ್ಲ ಎನ್ನುವುದು ಒಳ್ಳೆಯ

ನಿಘಂಟನ್ನು ರಚಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸಿದವರಿಗೆಲ್ಲ ತಿಳಿದ ವಿಷಯ ವಾಗಿದೆ. ನಿಘಂಟುಗಳು ನಾನಾ ಬಗೆಯವಾದರೂ ಶಬ್ದಾರ್ಥವಿಚಾರದ ಸಂಗತಿ, ಸಮಸ್ಯೆಗಳು ಪ್ರಸ್ತುತವಾಗುವುದು ಭಾಷಾಕೋಶಗಳಲ್ಲಿಯೇ. ಈ ಸಂಗತಿ ಸಮಸ್ಯೆ ಗಳು ಏಕಭಾಷಿಕ, ಬಹುಭಾಷಿಕ ಕೋಶಗಳಿಗೆ ಸಮಾನವಾದರೂ ಇವುಗಳಿಗೆ ತಮ್ಮವೇ ಆದ ಪ್ರತ್ಯೇಕ ಸಮಸ್ಯೆಗಳು ಕೆಲವಿರುತ್ತವೆ. ನನ್ನ ಪರಿಶೀಲನೆಯನ್ನು ಏಕಭಾಷಿಕ ಕೋಶಕ್ಕೆ, ಹಾಗೂ ಕನ್ನಡ ಭಾಷೆಗೆ ಮಾತ್ರ ನಾನು ಸೀಮಿತಗೊಳಿಸುತ್ತೇನೆ. ಒಂದು ಅಧಿಕೃತವೂ ಆದರ್ಶಪ್ರಾಯವೂ ಆದ ನಿಘಂಟು ಕ್ಲಿಷ್ಟ, ಇಲ್ಲವೆ ಸರಳ ಎಂಬುದಾಗಿ ಶಬ್ದಗಳ ನಡುವೆ ಭೇದಭಾವ ಮಾಡದೆ ಒಂದು ಭಾಷೆಯ ಸಮಸ್ತ ಪದಪ್ರಪಂಚ ವನ್ನೂ ಒಳಕೊಳ್ಳುತ್ತದೆ; ಸಹಜವಾಗಿಯೇ ವ್ಯಾವಹಾರಿಕ ಹಾಗೂ ಗ್ರಾಮ್ಯರೂಪ ಗಳ ಆಯ್ಕೆಯಲ್ಲಿ, ಅನ್ಯದೇಶ್ಯಗಳ ಆಯ್ಕೆಯಲ್ಲಿ ಅದು ಕೆಲವು ನಿಯಮಗಳನ್ನು ಪಾಲಿಸಿರುತ್ತದೆ ಎನ್ನುವುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅಂತೂ ಅದರ ದೃಷ್ಟಿ ಸಾಧ್ಯವಿದ್ದ ಮಟ್ಟಿಗೆ ಸಮಗ್ರತೆಯ ದೃಷ್ಟಿ, ಸಾಧುಪ್ರಯೋಗಗಳ ಸ್ವೀಕಾರ ದೃಷ್ಟಿ.

ಯಾವುದೇ ಭಾಷೆಯಲ್ಲಿ ವಿದ್ವಾಂಸರಿಗೆ ನಿಘಂಟಿನ ಆವಶ್ಯಕತೆ ಅಷ್ಟಾಗಿ ಇಲ್ಲ. ಸಾಮಾನ್ಯ ವಿದ್ಯಾವಂತರಿಗೆ ಆಗಾಗ ಅದು ಬೇಕಾಗಬಹುದು. ಅಭ್ಯಾಸಿಗಳಿಗೆ ಅದು ಅತ್ಯಂತ ಅವಶ್ಯ. ಒಂದು ಭಾಷೆಯ ಪರಿಚಯವಿರುವವರಿಗಿಂತ ಅನ್ಯಭಾಷಿಕರಿಗೆ ಅರ್ಥ ಪರಿಜ್ಞಾನ ಮಾಡಿಕೊಡುವುದು ಕಷ್ಟದ ಕೆಲಸ. ಅದಕ್ಕೆ ದ್ವಿಭಾಷಿಕ ಮಾಧ್ಯಮ ಬೇಕು. ಒಂದು ಒಳ್ಳೆಯ ಏಕಭಾಷಿಕ ನಿಘಂಟು ಕನಿಷ್ಠಪಕ್ಷ ಆ ಭಾಷೆಯ ಎಲ್ಲ ವರ್ಗದ ಜನರ ಅಗತ್ಯಗಳಿಗೂ ಒದಗುವಂತಿರಬೇಕು. ಆ ಭಾಷೆಯ ಅಂಗೀಕೃತ ಪದಪ್ರಪಂಚದ ದೊಡ್ಡ ಭಂಡಾರವೂ ಆ ಭಂಡಾರದ ಕೀಲಿಕೈಗಳೂ ಒಟ್ಟಿಗೆ ದೊರೆಯುವಂತಿರಬೇಕು. ಚಾರಿತ್ರಿಕ ತತ್ತ್ವಗಳ ಮೇಲೆ ಸಿದ್ಧವಾಗುವ ನಿಘಂಟು ಅತ್ಯುತ್ತಮವಾದ್ದು ಎಂದರೂ ಅದರ ಉಪಯುಕ್ತಾಂಶಗಳನ್ನೆಲ್ಲ ಒಳಕೊಂಡ ಸಂಕ್ಷಿಪ್ತ ನಿಘಂಟು ವಿದ್ವಾಂಸನಿಂದ ಸಾಮಾನ್ಯನ ವರೆಗೆ ಎಲ್ಲರ ಅಗತ್ಯಗಳನ್ನೂ ಸಾಧ್ಯವಿದ್ದ ಮಟ್ಟಿಗೆ ಪೂರೈಸಬಲ್ಲುದು. ನಿಘಂಟುಗಳು ಸಹ ಯಾರಿಂದ, ಯಾರಿಗಾಗಿ ಮತ್ತು ಏತಕ್ಕಾಗಿ ಎಂಬ ಪ್ರಶ್ನೆಗಳನ್ನು ಹಿಡಿದು ವಿವಿಧವಾಗಿರುತ್ತವೆ ಎನ್ನುವುದು ತಿಳಿದೇ ಇದೆ.

೩

ನಿಘಂಟಿನಲ್ಲಿ ಅತಿಕಠಿನವಾದ ಶಬ್ದಗಳಿಗೆ ಅರ್ಥ ಹೇಳುವುದು ಎಷ್ಟು ಕಷ್ಟವೋ, ಅಷ್ಟೇ ಕಷ್ಟವಾದ್ದು ಬಹುಶಃ ಅತಿಸುಲಭವಾದ ಶಬ್ದಗಳಿಗೆ ಅರ್ಥ ಹೇಳುವುದು. ತನ್ನದೇ ಭಾಷೆಯಲ್ಲಿ ಇವುಗಳಿಗೆ ಪ್ರತಿಶಬ್ದಗಳು ದೊರೆಯುವುದು ಕಷ್ಟ. ಜಡವಸ್ತುಗಳು (ಉದಾ ; ಕಲ್ಲು, ನೀರು, ಬೆಂಕಿ, ಗಿಡ), ಗಿಡಮರಗಳು

(ಉದಾ: ಆಲ, ಬೇಲ, ಮಾವು, ಮಲ್ಲಿಗೆ), ಪ್ರಾಣಿಗಳು (ಉದಾ: ಇಲಿ, ಹುಲಿ, ಹಲ್ಲಿ, ಕಾಗೆ), ಶರೀರದ ಅಂಗಗಳು (ಉದಾ: ಕೈ, ಕಾಲು, ತಲೆ, ಬೆರಲು), ತಿಂಡಿತೀರ್ಥಗಳು (ಉದಾ: ಬೋಂಡ, ಗೊಜ್ಜು, ಕೋಡುಬಳೆ, ಮುಚ್ಚೋರೆ), ದಿಕ್ಕುಗಳು (ಉದಾ: ಮೂಡ, ಪಡುವ, ತೆಂಕ, ಬಡಗ) ಇಂತಹ ರೂಢನಾಮ ಶಬ್ದಗಳನ್ನು ಗಮನಿಸಿದರೆ ಇದು ತಿಳಿಯುತ್ತದೆ. ಹೀಗೆಯೇ ಸರ್ವನಾಮ ಶಬ್ದಗಳ, ಕ್ರಿಯಾಪದಗಳ ವಿಚಾರವೂ ಇರುತ್ತದೆ. ಸುಪರಿಚಿತ ಮೂಲಶಬ್ದಗಳಿಗೆ, ಎರವಲು ಶಬ್ದಗಳಿಗೆ ಪರ್ಯಾಯ ಶಬ್ದಗಳು ದೇಶ್ಯಶಬ್ದಗಳ ಗುಂಪಿನಲ್ಲಿಯೇ ಸಿಕ್ಕುವುದು ಕಷ್ಟ. ಸಂಸ್ಕೃತ ಶಬ್ದಭಂಡಾರದ ಸಹಾಯ ಪಡೆದು ಇಲ್ಲವೆ ವ್ಯಾಖ್ಯಾನದ ಬಳಸು ವಿಧಾನವನ್ನು ಅನುಸರಿಸಿ ಅರ್ಥಗಳನ್ನು ಹೇಳಬೇಕಾಗುತ್ತದೆ (ಉದಾ: ನೀರು–ಜಲ, ಹುಲಿ–ವ್ಯಾಘ್ರ, ತೆಂಕ–ದಕ್ಷಿಣ, ತಲೆ–ಶಿರಸ್ಸು; ಉತ್ತರ–ಉದಯಿಸುತ್ತಿರುವ ಸೂರ್ಯನಿಗೆ ಮುಖ ಮಾಡಿ ನಿಂತಾಗ ಎಡಕ್ಕಿರುವ ದಿಕ್ಕು, ರಕ್ತ–ದೇಹದ ನಾಳ ವ್ಯವಸ್ಥೆಯ ಮೂಲಕ ಚಲಿಸುವ ಜೀವದಾಯಕ ಕೆಂಪು ದ್ರವ, ನೆತ್ತರು). ಅರ್ಥ ಸೂಚನೆಯ ಕಷ್ಟವೇನೆಂದು ತಿಳಿಯಬೇಕಾದರೆ, ಕನ್ನಡ ಭಾಷೆಯ ತಿಂಡಿಪದಾರ್ಥ 'ಕೋಡುಬಳೆ' ಶಬ್ದಕ್ಕೆ ಸ್ಯಾಂಡರ್ಸನ್ ಕೋಶದಲ್ಲಿರುವ ಅರ್ಥ ನೋಡಿ:

ಗಿಡಮರಗಳಿಗೆ, ಹೂ ಹಣ್ಣುಗಳಿಗೆ, ಪಶುಪಕ್ಷಿಗಳು ಕ್ರಿಮಿಕೀಟಾದಿಗಳಿಗೆ ಅರ್ಥ ಹೇಳುವುದು ಇನ್ನೂ ಕಷ್ಟ. ಅವು ನಿರ್ದಿಷ್ಟ ವ್ಯಾಖ್ಯೆಯನ್ನು ಅಪೇಕ್ಷಿಸುವ ಶಬ್ದಗಳು. ನಿಘಂಟುಕಾರನು 'ಒಂದು ಬಗೆಯ ಮರ', 'ಒಂದು ಬಗೆಯ ಹಕ್ಕಿ' ಎಂದು ಮುಂತಾಗಿ ಬರೆದು ಸುಲಭವಾಗಿ ಜಾರಿಕೊಂಡುಬಿಡುತ್ತಾನೆ. ಹೀಗೆ ಮಾಡು ವುದು ಕೆಲವು ವೇಳೆ ಅನಿವಾರ್ಯವಾಗಬಹುದು. ಆದರೆ ಇಂತಹ ಪಾರಿಭಾಷಿಕ ಶಬ್ದಗಳನ್ನು ವಿವರಿಸಿರುವ, ಪ್ರತಿಶಬ್ದಗಳನ್ನು ಸೂಚಿಸಿರುವ ಕೆಲವು ನಿಘಂಟುಗಳೂ ವಿಶಿಷ್ಟಪದಸೂಚಿಗಳೂ ಇದ್ದು, ಅವನ್ನು ಬಳಸಿಕೊಂಡು ತನ್ನ ಜವಾಬ್ದಾರಿಯನ್ನು ತೃಪ್ತಿಕರವಾಗಿ ನಿರ್ವಹಿಸುವುದು ಸಾಧ್ಯವಿದೆ. ಇವು ರಚಿತವಾಗಿರುವುದೇ ಭಾಷಾ ನಿಘಂಟುಕಾರನ ಕಷ್ಟನಿವಾರಣೆಗಾಗಿ. ಈ ದಿಕ್ಕಿನಲ್ಲಿ ಮುಮ್ಮಡಿ ಕೃಷ್ಣರಾಜರ ಕಾಲದ 'ಚಾಮುಂಡಾ ಲಘು ನಿಘಂಟು' ಎಂಬುದರ ಸಹಾಯ ನೆನೆಯತಕ್ಕುದು. ಇಂತಹ ನಿಘಂಟುಗಳು ಇನ್ನೂ ಕೆಲವುಂಟು. ಆದರೆ ಈ ಬಗೆಯ ಸಹಾಯ ನಮಗೆ ಕ್ರೀಡೆ ಮನೋರಂಜನೆ, ವಾದ್ಯಗಳು, ಆಯುಧಗಳು, ಆಟಿಕೆಗಳು, ಇಂತಹವುಗಳಿಗೆ ದೊರೆಯುವುದು ಕಷ್ಟ. ಇದಕ್ಕಿಂತ ಕಷ್ಟವಾದ್ದು ಎಂದರೆ, ಒಂದು ಕಾಲಕ್ಕೆ ಬಳಕೆ ಯಲ್ಲಿದ್ದು, ಕಾಲಾಂತರದಲ್ಲಿ ರೂಢಿ ತಪ್ಪಿದ ಸಂಗೀತ, ನೃತ್ಯ, ಚಿತ್ರ ಮುಂತಾದ ಲಲಿತಕಲೆಗಳಿಗೆ, ಮಲ್ಲವಿದ್ಯೆ, ಅಶ್ವಶಾಸ್ತ್ರ, ಗಜಶಾಸ್ತ್ರ ಮೊದಲಾದ ಶಾಸ್ತ್ರಭಾಗಗಳಿಗೆ ಸಂಬಂಧಿಸಿದ ಶಬ್ದಗಳಿಗೆ ಅರ್ಥ ಹೇಳುವ ಕೆಲಸ.

ದೇಶ್ಯಶಬ್ದಗಳನ್ನು ಸ್ಥಾನಾಂತರಗೊಳಿಸಿ ಇಲ್ಲವೆ ಬಳಕೆಯಲ್ಲಿ ವಿರಳಗೊಳಿಸಿ

ಸ್ಥಾಪಿತವಾಗಿರುವ ಅನ್ಯದೇಶ್ಯಶಬ್ದಗಳಿಗೆ ನಿಖರವಾಗಿ ಅರ್ಥ ಹೇಳುವುದು ಕಷ್ಟವಾಗದು (ಉದಾ : ರಕ್ತ–ನೆತ್ತರು, ಚಂದ್ರ–ತಿಂಗಳು, ನಕ್ಷತ್ರ–ಅರಿಲು, ಆಕಾಶ–ಬಾನು). ಆದರೆ ಸಾಂಸ್ಕೃತಿಕ ಹಾಗೂ ತತ್ತ್ವಪರ ಶಬ್ದಗಳಿಗೆ ಹೇಳುವುದೀಗ ಕಷ್ಟ (ಉದಾ : ವಸ್ತು, ಗುಣ, ದೇವರು, ತತ್ತ್ವ). ಇಲ್ಲಿ ಬಳಸುವಿಧಾನ ಅನಿವಾರ್ಯ. ಗ್ರಾಮೀಣರು ರೂಢಿಯಲ್ಲಿಟ್ಟುಕೊಂಡಿರುವ ದೇಶ್ಯಶಬ್ದಗಳು ಮಾಡುವ ಸಹಾಯವನ್ನು ಪಡೆಯಲು ನಿಘಂಟುಕಾರ ಹಿಂಜರಿಯಬಾರದು (ಉದಾ : ಸ್ವಲ್ಪ-ಒಸಿ, ಗುಲ್ಮ-ತೊರಳೆ, ಕತ್ತಲೆ-ಕಾವಳ, ಬೆಕ್ಕು-ಕೊತ್ತಿ). ಸುಲಭವಾದ ಅನ್ಯದೇಶ್ಯಗಳ ವಿಚಾರದಲ್ಲಿ ಯಾವ ತೊಡಕೂ ಇರುವುದಿಲ್ಲ (ಉದಾ : ಗಜ-ಆನೆ, ವಾಜಿ-ಕುದುರೆ, ಸವಲತ್ತು-ಸೌಕರ್ಯ, ಶಾಕ್ವರ-ಎತ್ತು) ; ತದ್ಭವಗಳ ವಿಚಾರವೂ ಅಷ್ಟೆ (ಉದಾ : ಬೇಸಾಯ-ವ್ಯವಸಾಯ, ದನಿ-ಧ್ವನಿ, ಪಕ್ಷಿ-ಹಕ್ಕಿ, ವೇತ್ರ-ಬೆತ್ತ).

ಕಠಿನ ಶಬ್ದಗಳ ವಿಚಾರ ಒಂದು ದೃಷ್ಟಿಯಿಂದ ಸುಲಭ, ಇನ್ನೊಂದು ದೃಷ್ಟಿಯಿಂದ ಕಷ್ಟ. ಕಠಿನ ಶಬ್ದಗಳು ಎಂದರೆ, ತತ್‍ಕ್ಷಣವೇ ಅಭಿಪ್ರಾಯವಾಗದ ಗ್ರಾಂಥಿಕ ಶಬ್ದ, ನಷ್ಟಶಬ್ದ, ಪ್ರೌಢಕವಿ ಪ್ರಯೋಗದ ಶಬ್ದ, ನೈಘಂಟುಕ ಶಬ್ದ ಎಂದು ಮುಂತಾಗಿ ಅರ್ಥೈಸಬಹುದು. ಇವುಗಳಿಗೆ ಅರ್ಥ ಹೇಳುವುದು ಸುಲಭ; ಹೇಗೆಂದರೆ, ಈಗಾಗಲೇ ಇತರ ನಿಘಂಟುಗಳು, ವಿದ್ವಾಂಸರ ಟಿಪ್ಪಣಿಗಳು ಇವುಗಳ ಅರ್ಥಗಳನ್ನು ಚರ್ಚಿಸಿರುತ್ತವೆ, ಸಿದ್ಧಮಾಡಿರುತ್ತವೆ. ಇವಕ್ಕೆ ಸಾಂದರ್ಭಿಕ ಸಾಕ್ಷ್ಯಗಳು, ಭಾಷಾಶಾಸ್ತ್ರದ ವಿವರಣೆಗಳು, ಜ್ಞಾತಿಪದಕೋಶಗಳು, ಅನ್ಯ ಬಾಹ್ಯಸಾಕ್ಷ್ಯಗಳೂ ನೆರವಾಗಿರುತ್ತವೆ. ಇವನ್ನು ನಾವು ಒಪ್ಪಬಹುದು, ಇನ್ನೂ ನಿಖರಗೊಳಿಸಬಹುದು (ಉದಾ : ಬಿಸವಂದ, ಬಂಡಣ, ವಳಿಗೆ, ತೊಡಂಬೆ, ಪಿಳುಕು, ಕಸವರ, ಜೂಳೆಯ, ದೂಸಿಗ, ಬರಡಗೆ). ಇನ್ನೊಂದು ದೃಷ್ಟಿಯಿಂದ ಕಷ್ಟ. ಅವು ನಷ್ಟ ಶಬ್ದಗಳೋ ನೈಘಂಟುಕ ಶಬ್ದಗಳೋ ಆಗಿರಬಹುದು. ಅರ್ಥ ಹೇಳಲು ತಕ್ಕ ಸಾಕ್ಷ್ಯಗಳು ತೀರ ದುರ್ಲಭವಾಗಿರುತ್ತವೆ (ಉದಾ : ಕರ್ಚರೆ, ತೊಳಕು ಇ. ಈ ಶರೀರ ಭಾಗಗಳು ; ಅಳಸು, ಸೋದಿಗೆ, ಈ ತಿಂಡಿಗಳು ; ಪಾನಿಗಟ್ಟು, ಅಜಬುಗನೆ ಈ ಆಚರಣೆಗಳು ; ಕೊರಳಿ, ಮರಿಪಿಟ್ಟು ಈ ಸಾಮಗ್ರಿಗಳು ; ಕೋಳಿ ಕಾಳಿಕಾಜಿ, ತಜದ ಗುಜುಗೆಯರ್ ಈ ವ್ಯಕ್ತಿವಾಚಕಗಳು ; ಕೆಲ್ಲಂಬು, ಪಂಚರಾಯುಧ ಈ ಆಯುಧಗಳು ; ಸನ್ಯಂಗ, ಬೀರಣೆ, ಸಣ್ಣೀರ, ಚೆನ್ನಗುಳ್ಳೆ ಇ.). ಪ್ರಾಚೀನ ಕರ್ನಾಟಕದ ಸಾಮಾಜಿಕ ಹಾಗೂ ಆರ್ಥಿಕ ಜೀವನದ, ಆಡಳಿತ ವ್ಯವಹಾರದ ಸಹಸ್ರಾರು ಶಬ್ದಗಳು ಹೀಗೆಯೇ ಬರುಬರುತ್ತ ಬಳಕೆ ತಪ್ಪಿ, ರೂಪಾಂತರಗೊಂಡು ಅವುಗಳ ಆಶಯಗಳೇ ನಮಗೆ ಇಂದು ಅಸ್ಪಷ್ಟ ಎನ್ನುವಂತಾಗಿದೆ. ಇವು ಸದ್ಯದಲ್ಲಿ ನಿಘಂಟುಕಾರನಿಗೆ ಸವಾಲುಗಳಾಗಿದ್ದರೂ ಮುಂದೆ ಎಂದೋ ಹೊಸ ಸಾಮಗ್ರಿ ದೊರೆತ ಹಾಗೆ ಪರಿಹಾರವಾಗಬಹುದು ; ಆಗದೆಯೂ ಇರಬಹುದು.

ಕಠಿನಗಳಾದ ಅನ್ಯದೇಶ್ಯಗಳು, ಅವುಗಳ ಮೂಲದಲ್ಲೇ ಅರ್ಥ ಸಿದ್ಧವಿದ್ದಾಗ ಕಷ್ಟವಾಗದು (ಉದಾ : ಸ್ತಂಬೇರಮ-ಆನೆ, ಲೋಷ್ಟ-ಮಣ್ಣಿನ ಹೆಂಟೆ, ಸಾಂಯಾತ್ರಿಕ-ಸಮುದ್ರ ವ್ಯಾಪಾರಿ, ಧಮ್ಮಿಲ್ಲ - ತುರುಬು) ; ತದ್ಭವಗಳೂ ಕಷ್ಟವಾಗವು (ಉದಾ : ಸಪ್ಪಳ<ಸತ್ಫಲ, ಸತ<ಕ್ಷತ, ಬಿಯಸಂಗ<ವ್ಯಾಸಂಗ, ಗೋಸಣೆ<ಘೋಷಣೆ). ತದ್ಭವಗಳು ನಾನಾ ಮೂಲಗಳಿಂದ ಬಂದಿದ್ದ ಪಕ್ಷದಲ್ಲಿ ಭಾಷಾಶಾಸ್ತ್ರೀಯವಾಗಿ ಆ ಮೂಲಗಳನ್ನು ಗುರುತಿಸಿ ಅರ್ಥಗಳನ್ನು ವಿಶದಮಾಡಬಹುದು (ಉದಾ : ಗಟ್ಟ<ಗತ್ತಾ, ಗೋಸಗೆ<ಗೋಸಗ್ಗ, ಜೂಳಿಯ<ಜೂಲಿಯಾ, ಜತರೆ<ಜತ್ತಾ).

ದೇಶ್ಯಗಳೂ ಒಗ್ಗಿದ ತದ್ಭವಗಳೂ ನಿಘಂಟುಕಾರರನ್ನು ದಾರಿತಪ್ಪಿಸುವುದು ಶಕ್ಯ. ಬೆಳಗ್ಗೆ ಎಂಬ ಅರ್ಥವಿರುವ 'ಸವಳದೆ' ಶಬ್ದಕ್ಕೆ ಒಂದು ಪದ್ಯಸಂಕಲನದ ಟಿಪ್ಪಣಿಭಾಗದಲ್ಲಿ 'ಒಂದು ಬಗೆಯ ವ್ರತ' ಎಂದು ಅರ್ಥ ಹೇಳಿದೆ. ಆರ್ದ್ರವಸ್ತ್ರ ಎಂಬ ಅರ್ಥವಿರುವ 'ಒಲ್ಲಣಿಗೆ' ಶಬ್ದಕ್ಕೆ ಅದು ಪ್ರಯೋಗವಾಗಿರುವ ಪ್ರಸಿದ್ಧ ಕಾವ್ಯದ ಶಬ್ದಕೋಶದಲ್ಲಿ 'ಗಾಣ' ಎಂದು ಅರ್ಥ ಹೇಳಿದೆ. ಇಂತಹ ಉದಾಹರಣೆಗಳನ್ನು ಇನ್ನೂ ಎಷ್ಟೋ ಕೊಡಬಹುದು. ಹೆಣ್ಣುಗಿಳಿ ಎಂಬರ್ಥದ 'ಪುರುಳಿ' ಶಬ್ದಕ್ಕೆ 'ಗೋವು' ಎಂಬರ್ಥವನ್ನು ಕೊಟ್ಟು ಬಳಸಿರುವ (ಲೀಲಾ ೫–೯೧) ಹಾಗೆ, ತೋರುವ ಪ್ರಯೋಗವಿದೆ ; ಸ್ನೇಹ ಎಂಬರ್ಥದ 'ನೇಸನ್ನಿಕೆ' ಎಂಬ ಶಬ್ದದ ಅರ್ಥವನ್ನು ತಮಿಳಿನ ಸಹಾಯವಿಲ್ಲದೆ ಅರ್ಥೈಸುವುದೇ ಶಕ್ಯವಿಲ್ಲ ; ಓವಣ, ಮಿಂತಲೆ, ಬಕ್ಕಳೆ, ಸತ್ತಿಗ ಮುಂತಾದುವನ್ನು ತತ್‌ಕ್ಷಣವೇ ಅರ್ಥೈಸುವುದು ಸಾಧ್ಯವಿಲ್ಲದಂತೆ ನಿಘಂಟುಕಾರನನ್ನು ಅವು ಕೆಣಕುತ್ತವೆ. ಕೆಲವು ಸಮಾಸ ಶಬ್ದಗಳು ವಿಶಿಷ್ಟ ಸನ್ನಿವೇಶದ ದ್ಯೋತನಕ್ಕಾಗಿ ಕಾಣಿಸಿಕೊಂಡಿದ್ದು (ಉದಾ : ಎಟ್ಟಬೊಜಂಗ, ಕತ್ತುರಿಬೊಜಂಗ ಇ. ; ಗೋಸುಗಲಿ, ಸಿರಗಲಿ, ಕರ್ಬಸುಗಲಿ ಇ.) ಇವುಗಳ ಅರ್ಥವನ್ನು ನಿಖರಪಡಿಸುವುದಾಗಬೇಕಾದರೆ ನಮಗೆ ಒಂದು ಕಾಲದ ಸಾಂಸ್ಕೃತಿಕ ಸಂದರ್ಭಗಳ ಪರಿಚಯವಾಗಬೇಕು. ಸಂಜೆವಾರಿಸು, ಪಲ್ಲವಸತ್ತಿಗೆ, ಬಳಿನೀರ್, ನೆಯ್ಯೋಱಿಸು, ದಿಬ್ಯ, ಬಣ್ಣವುರ, ಮುಡಿಗಿಕ್ಕು ಇಂತಹ ಶಬ್ದಗಳೂ ಹೀಗೆಯೇ. ಅನೇಕ ಕಡೆ ಪದಚ್ಛೇದ ದೋಷ ಕಾರಣವಾಗಿ ಮಿಥ್ಯಾಶಬ್ದಗಳೇ ಹುಟ್ಟಬಹುದು ; ಅರ್ಥ ಹೇಳುವಾಗ ಅವನ್ನು ಮಿಥ್ಯಾಶಬ್ದಗಳೆಂದು ನಿಘಂಟುಕಾರ ಗುರುತಿಸಲು ಶಕ್ತನಾಗಿರಬೇಕು (ಉದಾ : ಕಟಿತ್ರಿಕೊಡೆ/ಕಟಿತ್ರಿ-ಕೊಡೆ, ದೇವ-ಸವಳ/ದೆವಸ-ವಳ, ಏಳಿ-ದಿಟ/ಏಳಿದಿಟ). ಹೀಗೆಯೇ ಸಂಧಿದೋಷಗಳನ್ನು ಸಹ (ಉದಾ : ಇಜ್ಜಾಡಿಸು – ನಿಜ್ಜಾಡಿಸು, ಲಾವಗೆಯುಂ ಕೇಕೊರಸುಂ–ಲಾವುಗೆ-ಉಂಕೆ-ಕೊರಸುಂ).

ಒಂದು ಶಬ್ದದ ಅರ್ಥದ ವ್ಯಾಪ್ತಿ ಕಾಲಕಾಲಕ್ಕೆ ಬೆಳೆದಿದ್ದರೆ, ಅರ್ಥಚ್ಛಾಯೆಗಳ ಹಾಗೂ ಅರ್ಥಾಂತರಗಳ ವ್ಯತ್ಯಾಸಗಳನ್ನು ನಿರೂಪಿಸುವುದು ಚಾರಿತ್ರಿಕ ತತ್ತ್ವದ

ಆಧಾರದ ಮೇಲೆ ಸಿದ್ಧವಾದ ನಿಘಂಟುಗಳಲ್ಲಿರಲಿ, ಸಾಮಾನ್ಯ ನಿಘಂಟುಗಳಲ್ಲಿ ಸಹ ಅವಶ್ಯಕರ್ತವ್ಯವಾಗಿದೆ. ಶಬ್ದದ ರೂಪಾಂತರಗಳೂ ಗಮನಿಸತಕ್ಕುವಾಗಿರುತ್ತವೆ. ನಾವು ಸೂಚಿಸುವ ಅರ್ಥಚ್ಛಾಯೆಗಳು ಶಬ್ದಪ್ರಯೋಗ ಸಂದರ್ಭದ ಭಾವವಿಸ್ತಾರವನ್ನು ಬಲುಮಟ್ಟಿಗೆ ಅವಲಂಬಿಸಿರುತ್ತದೆ. ಅರ್ಥಾಂತರಗಳು ಕವಿಸ್ವಾತಂತ್ರ್ಯಮೂಲವಾಗಿರುತ್ತವೆ. ಈಯೆರಡು ಸಂದರ್ಭಗಳಲ್ಲಿಯೂ ಶಬ್ದದ ವಾಚ್ಯಾರ್ಥದ ಇತಿಮಿತಿಗಳನ್ನು ಎಚ್ಚರಿಕೆಯಿಂದ ಕಾಯ್ದುಕೊಂಡು, ದೂರಾನ್ವಯಕ್ಕೆ ಎಡೆಯಾಗದಂತೆ ಅರ್ಥಗಳನ್ನು ನಿಘಂಟುಕಾರ ಸೂಚಿಸಬೇಕಾಗುತ್ತದೆ. ಶಬ್ದಪ್ರಯೋಗ ಸಂದರ್ಭಗಳನ್ನು ಆಳವಾಗಿ ಪರೀಕ್ಷಿಸಬೇಕು. ಅರ್ಥಚ್ಛಾಯೆಗಳ ನಿರೂಪಣೆಯಲ್ಲಿ ವಾಚ್ಯಾರ್ಥಕ್ಕೆ ಸನ್ನಿಹಿತವಾದ ಅರ್ಥದಿಂದ ತೊಡಗಿ ಅಸ್ಪಷ್ಟಚ್ಛಾಯೆಯ ಅರ್ಥದವರೆಗೆ ಸಾಗುವುದು, ಬಳಿಕ ಅರ್ಥಾಂತರಗಳನ್ನು ಸೂಚಿಸುವುದು ಯಾವಾಗಲೂ ಅಪೇಕ್ಷಣೀಯ. ಈ ಕೊನೆಯ ಅಂಶದಲ್ಲಿ ನಾವು ತಪ್ಪುವ ಸಂಭವ ಹೆಚ್ಚು. ಅರ್ಥವನ್ನು ಊಹಿಸುವುದಕ್ಕಿಂತ ಪ್ರಶ್ನಚಿಹ್ನೆಯನ್ನಿಡುವುದು ಒಳ್ಳೆಯದು; ಸಾಮಾನ್ಯ ನಿಘಂಟು ಸಿದ್ಧತೆಯಲ್ಲಿ, ತಪ್ಪು ಅರ್ಥ ಕೊಡುವುದಕ್ಕಿಂತ ಅಂತಹ ಅರ್ಥಗಳನ್ನು ಕೊಡದಿರುವುದೇ ಲೇಸು. ಶಬ್ದಗಳಿಗೆ ತಪ್ಪು ಅರ್ಥ ಹೇಳುವುದಕ್ಕಿಂತ, ಅರ್ಥ ಹೇಳಲಾಗದ ಶಬ್ದಗಳನ್ನು ಕೈಬಿಟ್ಟರೂ ದೊಡ್ಡ ಪಾಪವೇನೂ ಆಗದು. ತಪ್ಪು ಅರ್ಥ ಹೇಳುವುದೀಗ ಪಾಪ. "ಒಂದು ತಪ್ಪನ್ನು ಮಾಡುವುದಕ್ಕೆ ಒಂದು ಕ್ಷಣ ಸಾಕು, ಅದು ಮತ್ತೆ ಸರಿಯಾಗುವುದಕ್ಕೆ ಒಂದು ನೂರು ವರ್ಷಗಳೇ ಬೇಕಾಗುತ್ತವೆ" ಎಂಬುದಾಗಿ ವಿದ್ವಾಂಸರಾದ ಎ. ಎನ್. ಉಪಾಧ್ಯೆ ಹೇಳುತ್ತಿದ್ದರು. ಯಾವುದೋ ಶಬ್ದಕ್ಕೆ ಪದ್ಯಗ್ರಂಥದ ಸಂಪಾದಕರು ತಪ್ಪು ಅರ್ಥ ಬರೆದಿದ್ದಾರೆಂದು ನಾನು ಹೇಳಿದಾಗ, ನನ್ನ ಗುರುಗಳಾದ ಡಿ. ಎಲ್. ನರಸಿಂಹಾಚಾರ್ಯರು–ವಿಖ್ಯಾತ ಹಳಗನ್ನಡ ವಿದ್ವಾಂಸರು – ನನ್ನೊಂದಿಗೆ "ನಿಘಂಟುಗಳಲ್ಲಿಯೇ ತಪ್ಪು ಅರ್ಥಗಳಿವೆಯಲ್ಲ, ಆ ಬಗ್ಗೆ ಯೋಚಿಸಿದ್ದೀಯಾ ?" ಎಂದು ಹೇಳಿ ನನ್ನ ಆತಂಕವನ್ನು ಹೆಚ್ಚಿಸಿದರು.

ಶಬ್ದಾರ್ಥಗಳನ್ನು ಸೂಚಿಸುವಾಗ ನಮಗೆ ಎಷ್ಟು ಎಚ್ಚರಿಕೆ, ಹಿಂಜರಿಕೆಗಳಿದ್ದರೂ ಕಡಮೆಯೇ. ಅಧಿಕೃತ ಕನ್ನಡ–ಕನ್ನಡ ನಿಘಂಟಿನಲ್ಲಿ 'ಖಲ್ವಾಯಿತ' ಶಬ್ದಕ್ಕೆ ಸೂಚಿತವಾಗಿರುವ ಅರ್ಥ ಪ್ರಶ್ನೆಸಹಿತವಾಗಿ ಸೂಚಿತವಾಗಿದೆ. ಇಲ್ಲಿ ಅರ್ಥ ಸೂಚಿಸದೆ ಬರಿಯ ಪ್ರಶ್ನೆಯಿಟ್ಟಿದ್ದರೆ ಕ್ಷೇಮವಾಗಿತ್ತು. ಈ ಶಬ್ದಪ್ರಯೋಗವಿರುವ ಕಾವ್ಯಭಾಗ ಚಿಕ್ಕ ತರಗತಿಗಳಿಗೆ ಪಠ್ಯಭಾಗವಾಗಿ ನಿಯಮಿತವಾದಾಗ, ವಿದ್ಯಾರ್ಥಿಗಳು, ಅಧ್ಯಾಪಕರು ಮೊದಲುಗೊಂಡು ಹಲವರಿಂದ ಅತೃಪ್ತಿಕರ ಅರ್ಥದ ಬಗೆಗೆ ನಾನಾ ಟೀಕೆ ಟಿಪ್ಪಣಿಗಳು ಬಂದು ನಿಘಂಟುಕಛೇರಿಯ ಜನಕ್ಕೆ ಪೇಚಾಟವಾಯಿತೆನ್ನುವುದು ನನ್ನ ತಿಳಿವಳಿಕೆ. ಇಲ್ಲಿ ಇನ್ನೂ ಒಂದು ತೊಡಕಿನ ಬಗೆಗೆ ಹೇಳಬೇಕಾಗಿದೆ. ಕೆಲವೊಮ್ಮೆ ಲಿಪಿಕಾರಲೇಖನಸ್ಖಾಲಿತ್ಯಗಳೋ ಮುದ್ರಣದೋಷಗಳೋ ವ್ಯಾಕರಣ

ಶುದ್ಧವಾದ ರೂಪವೆಂದೂ ಕವಿರೂಢಿಯ ಪ್ರಯೋಗವೆಂದೂ ಅಭಿಪ್ರಾಯವಾಗುವಂತೆ ನಿಘಂಟಿನೊಳಗೆ ಹೇಗೋ ಸ್ಥಳ ಗಿಟ್ಟಿಸಿ, ನಿಘಂಟುಕಾರನ ಕಡೆಗೆ ಹಲ್ಲುಕಿರಿಯುತ್ತಿರುತ್ತವೆ. ಇಂತಹ ಶಬ್ದಪಿಶಾಚಿಗಳೂ ತಮಗೆ ಅರ್ಥವಿವರಣೆಯ ಕೈಂಕರ್ಯವನ್ನು ಬೇಡುತ್ತ, ಅವನನ್ನು ಕಾಡುತ್ತಿರುತ್ತವೆ. ಇವುಗಳ ಬಗೆಗೆ ನಮಗೆ ಹೆಚ್ಚು ಎಚ್ಚರವಿರಬೇಕು. ಇವೂ ಒಂದು ರೀತಿಯಲ್ಲಿ ಮಿಥ್ಯಾಶಬ್ದಗಳೇ ಸರಿ. ನಿಘಂಟುಕಾರ ದುರ್ಬಲನಾಗಿದ್ದರೆ, ಇವು ಅವನ ಮೇಲೆ ಸವಾರಿ ಮಾಡುತ್ತವೆ. ಇಂಥವನ್ನು ಮಿಥ್ಯಾಶಬ್ದಗಳೆಂದು ಗುರುತಿಸಿ ಅವನು ಕೈಬಿಡಬೇಕಾಗುತ್ತದೆ (ಉದಾ : ಕಡಂದುಱು-ಕಡಂದುಱುತೆ ; ನಳಿತೋಳ್ - ನಳಿದೋಳ್ ; ಅಗವಡೂ-ಅಘವಡು ; ತೊಂಡು-ಕೊಂಡು).

ಅಂತೂ ಶಬ್ದಾರ್ಥವಿವೇಚನೆಯ ನಿಖರತೆಗೆ ನಿಘಂಟುಕಾರ ಕಾವ್ಯಗಳನ್ನು ಚೆನ್ನಾಗಿ ಓದಿದವನಾಗಿರಬೇಕು, ಶಾಸ್ತ್ರಗಳನ್ನು ತಿಳಿದವನಾಗಿರಬೇಕು. ಭಾವಜ್ಞನೂ ಸಹೃದಯನೂ ಆಗಿರಬೇಕು. ಜ್ಞಾಪಕಶಕ್ತಿಯುಳ್ಳವನಿರಬೇಕು. ಭಾಷೆಯ ವಿಭಿನ್ನ ಅವಸ್ಥೆಗಳ ಪರಿಚಯವುಳ್ಳ ವೈಯಾಕರಣನಾಗಿರಬೇಕು. ಜ್ಞಾತಿಶಬ್ದಗಳ ಭಾಷಾ ಸ್ಕಂಧವನ್ನೂ ಸಂಸ್ಕೃತ ಪ್ರಾಕೃತಗಳನ್ನೂ ಬಲ್ಲವನಾಗಿರಬೇಕು. ಗ್ರಂಥಸಂಪಾದನೆಯ ತತ್ತ್ವಗಳನ್ನೂ ಲಿಪಿಶಾಸ್ತ್ರದ ತತ್ತ್ವಗಳನ್ನೂ ಅರಿತವನಿರಬೇಕು, ಅವನ ವ್ಯುತ್ಪತ್ತಿಗೆ, ದಿಟವಾಗಿ ನೋಡಿದರೆ, ಮಿತಿಯನ್ನು ಹಾಕುವುದಕ್ಕೆ ಸಾಧ್ಯವೇ ಇಲ್ಲ. ಇಂತಹ ಸಾಮರ್ಥ್ಯ, ಸಿದ್ಧತೆಗಳಿದ್ದವನು ಮಾತ್ರವೇ ಆದರ್ಶಪ್ರಾಯವೂ ಪ್ರಮಾಣಭೂತವೂ ಆದ ನಿಘಂಟನ್ನು ಸಿದ್ಧಪಡಿಸಬಲ್ಲನು. ಒಂದು ಮಾತಿನಲ್ಲಿ ಹೇಳಬಹುದಾದರೆ, ಒಂದು ಒಳ್ಳೆಯ ಭಾಷಾನಿಘಂಟುವಿನ ರಚನೆ ಆ ಭಾಷೆಯ ಸಂಸ್ಕೃತಿಯನ್ನು ಪುನಸ್ಸೃಷ್ಟಿಸುವ ಪವಿತ್ರ ಕಾರ್ಯ ; ಪರಂಪರೆಯಲ್ಲಿ ಬೇರು ಬಿಟ್ಟು ಪ್ರಗತಿಪಥದಲ್ಲಿ ಕಣ್ಣುನೆಟ್ಟಿರುವವನ ಒಂದು ಬೌದ್ಧಿಕಯಾತ್ರೆ.*

---

* ಸಾಹಿತ್ಯ ಶಿರೋಮಣಿ ಪ್ರೊ|| ಎಸ್. ರಾಮಚಂದ್ರರಾವ್ ಸಂಭಾವನ ಗ್ರಂಥದೊಳಗಿನ 'Studies in Indian Culture') ಇಂಗ್ಲಿಷ್ ಲೇಖನ Semasiological Problems in The Kannada Lexicon ಎಂಬುದರ ಕನ್ನಡ ಮೂಲ.

# 'ಕರಿದು ಮಾಡಿದಂ ನಿಜಯಶಮಂ'—ಹೌದೇ?

—ಡಾ॥ ನ. ಸುಬ್ರಹ್ಮಣ್ಯ

ಪಂಪನಿಗೆ ತನ್ನ ಬಗ್ಗೆ, ತನ್ನ ವಂಶದ ಬಗ್ಗೆ, ತನ್ನ ಪೂರ್ವಜರ ಬಗ್ಗೆ ತುಂಬ ಅಭಿಮಾನ. ತನ್ನ ಪೂರ್ವಜನಾದ ಮಾಧವ ಸೋಮಯಾಜಿಯ ವಿಷಯದಲ್ಲಿ ಅಪಾರ ಗೌರವ. ಆತನ ಬಗ್ಗೆ ಪಂಪನೇ ಹೇಳಿರುವ ಮಾತುಗಳನ್ನು ಪರಿಭಾವಿಸಿ. ಮಾಧವಸೋಮಯಾಜಿ ಅಗ್ರಹಾರ, ಸಂಪತ್ತು ಮತ್ತು ಪದವಿಗಳಲ್ಲಿ ಅಗ್ರಗಣ್ಯನಾಗಿದ್ದ. ಅವನು "ಊರ್ಜಿತಪುಣ್ಯ"! ನಯವಂತ. ವತ್ಸಗೋತ್ರದಲ್ಲಿ ಹುಟ್ಟಿದವನು. ಸಕಲಶಾಸ್ತ್ರಗಳನ್ನೂ ಪರಿಷ್ಕಾರವಾಗಿ ತಿಳಿದಿದ್ದವನು—"ಸಕಳಶಾಸ್ತ್ರಾರ್ಥವಿನಿಶ್ಚಯಮತಿ". ಸಮುದ್ರದ ಅಂಚಿನವರೆಗೂ ಇದ್ದ ಭೂಮಿಯಲ್ಲೆಲ್ಲ ವಿಶೇಷ ಖ್ಯಾತಿಯನ್ನು ಪಡೆದವನು. ನಿಗ್ರಹಾನುಗ್ರಹ ಶಕ್ತಿಯನ್ನು ಹೊಂದಿದ್ದವನು. ಇಂದ್ರ ಚಂದ್ರ ಸೂರ್ಯ ಪವಮಾನರಾದಿಯಾಗಿ ದೇವತೆಗಳೆಲ್ಲ ಅವನ ಆಜ್ಞಾನುವರ್ತಿಗಳಾಗಿದ್ದರು. ಹವಿರ್ದಾನಕ್ಕೆ ಅವರನ್ನು ಆಹ್ವಾನಿಸಿದೊಡನೆ, ಮುಂದುಕಿದರೆ ಎಲ್ಲಿ ಶಾಪ ಕೊಟ್ಟಾನೋ ಎಂದು ಹೆದರಿ ಅವರು ಧಾವಿಸಿಬರುತ್ತಿದ್ದರಂತೆ. ದಿಙ್ಮಂಡಲವೆಲ್ಲ ಅವನಿಗೆ ಹೆದರಿ ಅವನ ಸೇವೆ ಮಾಡುತ್ತಿತ್ತು. ಅವನು ಸರ್ವಕ್ರತುಯಾಜಿಯಾಗಿದ್ದ. ಅವನ ಸಾಮರ್ಥ್ಯ ಇಂತಹದು.

ಇಷ್ಟು ಹೇಳಿದನಂತರ ಪಂಪ ಈ ಮಾತನ್ನು ಹೇಳುತ್ತಾನೆ:

> ವರ ದಿಗ್ವನಿತೆಗೆ ಪಾಟದ
> ಕುರುಳಾ ತ್ರೈಭುವನಕಾಂತೆಗಂ ದಲ್ ಕಂಠಾ-
> ಭರಣಮೆನೆ ಪರೆದ ತನ್ನ
> ಧ್ವರಧೂಮದೆ ಕರಿದು ಮಾಡಿದಂ ನಿಜಯಶಮಂ [ವಿ.ವಿ. ೧೪-೪೪]

ಮಾಧವ ಸೋಮಯಾಜಿ ಮಾಡುತ್ತಿದ್ದ ಅಧ್ವರದಿಂದ ಮೇಲೇಳುತ್ತಿದ್ದ ಧೂಮ, ವಾಸ್ತವವಾಗಿ ದಿಗ್ವನಿತೆಯ ಕೃತಕ ಕೇಶರಾಶಿಯಾಯಿತೋ, ತ್ರೈಭುವನಕಾಂತೆಯ ಕಂಠಾಭರಣವಾಯಿತೋ ಎಂಬಂತೆ ಹರಡಿತು. ತನ್ನ ಅಧ್ವರಧೂಮದಿಂದ ಮಾಧವ ಸೋಮಯಾಜಿ ತನ್ನ ಕೀರ್ತಿಯನ್ನು ಕರಿದುಮಾಡಿಕೊಂಡ.

ಊರ್ಜಿತಪುಣ್ಯನೂ ಸಕಲಶಾಸ್ತ್ರಾರ್ಥವಿನಿಶ್ಚಯಮತಿಯೂ ಸಮುದ್ರಾಂತ-ಧರಿತ್ರಿಯಲ್ಲಿ ವಿಖ್ಯಾತನೂ ಆಗಿದ್ದವನು ಆ ಮಾಧವಸೋಮಯಾಜಿ. ದೇವತೆಗಳು ಕೂಡ ಹೆದರಿ ಅವನನ್ನನುಸರಿಸುತ್ತಿದ್ದರು. ಅಂಥವನ ಕೀರ್ತಿಗೆ ಮಸಿ ಹತ್ತಬೇಕೇಕೆ? ಆ ಅಧ್ವರಧೂಮ ಮಸಿಹತ್ತಿಸುವ ಹೊಗೆಯಾಗಿದ್ದಿದ್ದರೆ ದಿಗ್ವನಿತೆಯ ಮುಖಕಮಲವನ್ನು ಕಳೆಗುಂದಿಸಿ ತ್ರೈಭುವನಕಾಂತೆಯ ಮುಖಕಾಂತಿಯನ್ನು ಕಂದಿಸ

ಬೇಕಾಗಿತ್ತಲ್ಲವೆ ? ಸೌಂದರ್ಯವನ್ನು ಉತ್ಕರ್ಷಗೊಳಿಸುವ "ಮಾಟದ ಕುರುಳ್", "ಕಂಠಾಭರಣಂ" ಆಗುತ್ತಿರಲಿಲ್ಲವಲ್ಲವೆ ? ಕವಿಯೇಕೆ ಅದನ್ನು ದಿಗ್ವನಿತೆಯ ಕೃತಕ ಕೇಶರಾಶಿಯನ್ನಾಗಿಯೂ ತ್ರೈಭುವನಕಾಂತೆಯ ಕಂಠಾಭರಣವನ್ನಾಗಿಯೂ ಸಂಭಾವಿಸಿದ ? ಕವಿಯ ಈ ಸಂಭಾವನೆಯನ್ನು ನೋಡಿದರೆ "ಆ ಸಮುದ್ರಾಂಬರೆಗಂ" ಇದ್ದ ಅವನ ಕೀರ್ತಿ ಅಧ್ವರವಮಾಡಿದುದರ ದೆಸೆಯಿಂದ ದಿಗಂತವ್ಯಾಪಿಯೂ ತ್ರಿಲೋಕ ಪ್ರಚುರವೂ ಆಯಿತು ಎಂದರ್ಥವಾಗುತ್ತದೆ. ಬೆಳ್ಳಗಿದ್ದ ಕೀರ್ತಿ ಮತ್ತಷ್ಟು ಬೆಳಗ ಬೇಕಾಗಿತ್ತೇ ಹೊರತು ಕಪ್ಪೇಕಾಯಿತು ?

ಪ್ರಕೃತ ಪದ್ಯವನ್ನು ವ್ಯಾಖ್ಯಾನಮಾಡುವಾಗ ಪ್ರಾಚಾರ್ಯ ಡಿ.ಎಲ್.ಎನ್. ರವರು "...ಇದನ್ನು ನೋಡಿದರೆ ಈ ಎಡೆಯಲ್ಲಿ ಪಂಪನ ಪದ್ಯ ಕೆಟ್ಟಿರುವಂತೆ ತೋರಿಬರುತ್ತದೆ. 'ಶುಕ್ಲತರಂ ಚಕಾರ' ಎಂಬ ಬಾಣನ ಮಾತುಗಳಿಗೆ ಪ್ರತಿಯಾಗಿ 'ಕರಿದು ಮಾಡಿದಂ' ಎಂದು ಏಕೆ ಬರೆದ ಪಂಪ ? ಇದು ಬಹುಶಃ 'ಕರಮೆ ಮಾಡಿದಂ' ಎಂದಿರಬಹುದೇನೊ ? ಎಂದರೆ ಅತಿಶಯವಾಗುವಂತೆಯೇ ಮಾಡಿದನು ಎಂಬರ್ಥ ಬರುತ್ತದೆ. ಅಂತು ಈ ಪದ್ಯ ಒಂದು ಸಮಸ್ಯೆಯಾಗಿದೆ" ಎನ್ನುತ್ತಾರೆ.[1]

ಡಾ॥ ಎಲ್. ಬಸವರಾಜು ಅವರು "ಇಲ್ಲಿ ಅಧ್ವರಧೂಮದಿಂದ ತನ್ನ ಯಶಸ್ಸನ್ನು ಸೋಮಯಾಜಿಯು 'ಕರಿದು' ಮಾಡಿದುದಾಗಿ ಹೇಳುವಂತಿದೆ. ಪಂಪನ ಉದ್ದೇಶವಿದೇ ಆಗಿದ್ದಿದ್ದರೆ–ಮೇಲಣ ಮೂರು ಸಾಲುಗಳಲ್ಲಿ ಆ ಅಯಶಸ್ಕರವಾದ ಅಧ್ವರಧೂಮವನ್ನು ದಿಗ್ವನಿತೆಗೆ ಮಾಟದ ಕುರುಳೆಂದೂ, ತ್ರೈಭುವನಕಾಂತೆಗೆ ಕಂಠಾಭರಣವೆಂದೂ ಅತಿಶಯಿಸಿರುವುದು ಸಮಂಜಸವಾಗುವುದಿಲ್ಲ. ಈ ಕಾರಣಕ್ಕಾಗಿಯೇ ಕರಿದು (ಮಾಡಿದಂ ನಿಜಯಶಮಂ) ಎಂಬುದನ್ನು **ಹಿರಿದು** (ಮಾಡಿದಂ ನಿಜಯಶಮಂ) ಎಂದು ತಿದ್ದಿಕೊಳ್ಳಬೇಕಾದುದು ಆ ಪದ್ಯದ ಒಟ್ಟಂದದ ಸಾರ್ಥಕತೆಯ ದೃಷ್ಟಿಯಿಂದ ಅನಿವಾರ್ಯ" ಎನ್ನುತ್ತಾರೆ.[2]

ಆದರೆ ಆ ಬಗ್ಗೆ ಒಳಹೊಕ್ಕು ಸಮಾಲೋಚಿಸಹೋಗದೆ ಬಿ.ಎಂ.ಶ್ರೀ., ತೀ.ನಂ.ಶ್ರೀ. ಆದಿಯಾದ ಎಲ್ಲ ವಿದ್ವಾಂಸರೂ ಮೊದಲಿನಿಂದಲೂ ಆ ಪಾಠವನ್ನು ಹಾಗೆಯೇ ಒಪ್ಪಿಕೊಂಡು ಬಂದಿದ್ದಾರೆ. ಈಚೆಗೆ ಆ ಪಾಠವೇ ಸರಿ ಎಂದು ಸಮರ್ಥನೆ ಮಾಡುವ ವಿದ್ವಾಂಸರೂ ಇದ್ದಾರೆ.[3] ಈ ಚರ್ಚಾಸ್ಪದವಾದ ಪಾಠದ ಪೂರ್ವಾಪರ

1. ಪಂಪಭಾರತ ದೀಪಿಕೆ, ಪುಟ ೫೭೦–೫೭೧.

2. "ಪಂಪ: ಒಂದು ಅಧ್ಯಯನ"—ಸಂ. : ಜಿ. ಎಸ್. ಶಿವರುದ್ರಪ್ಪ, ಪುಟ ೩೨೨ ಅಡಿಟಿಪ್ಪಣಿ.

3. "ಆದ್ದರಿಂದ 'ಕರಿದು' ಎಂಬುದೆ ಪಾಠವಿರಬೇಕು. ಇದು ಅಂತಸ್ಸಂಭಾವ್ಯತೆಯ ಒರೆಗಲ್ಲಿನಲ್ಲಿ ತೇರ್ಗಡೆಯಾಗುವ ಪಾಠ. ಬಾಹ್ಯಸಾಕ್ಷ್ಯ ಇದನ್ನು ವಿರೋಧಿಸದೆ ಬೆಂಬಲಿಸುತ್ತದೆ, ಪರೋಕ್ಷವಾಗಿ" — ಡಾ॥ ಸಿ. ಪಿ. ಕೆ., 'ಲೋಚನ', ಸಂಪುಟ ೩ – ಸಂಚಿಕೆ ೨, ಪುಟ 29.

ಗಳನ್ನು ಪರಿಶೀಲಿಸಿ, ಅಂತಸ್ಸಂಭಾವ್ಯತೆಯ ದೃಷ್ಟಿಯಿಂದ ಪ್ರಕೃತ ಪಾಠದಲ್ಲಿ ಭಿನ್ನಾರ್ಥಕಶಬ್ದದ ಪ್ರತಿನಿಧಾನವೇನಾದರೂ ನಡೆದಿದೆಯೋ ಎಂಬುದನ್ನು ನೋಡುವುದು ಈ ಲೇಖನದ ಉದ್ದೇಶ.

ನಮಗೆ ದೊರೆತಿರುವ ಎಲ್ಲ ಪಂಪಭಾರತದ ಪ್ರತಿಗಳಲ್ಲೂ "ಕರಿದು ಮಾಡಿದಂ" ಎಂಬ ಪಾಠವೇ ಇದೆ; ಯಾವುದರಲ್ಲೂ ಪಾಠಾಂತರ ಕಂಡುಬರುವುದಿಲ್ಲ ಎಂಬುದು ನಿಜ. ಆದರೂ ಆ ಪದ್ಯದ ಪೂರ್ವಾರ್ಧದಲ್ಲಿ ಅಸಂಗತವಾದ ಪಾಠಗಳಿದ್ದು ಪಂಪ ಭಾರತದ ಸಂಪಾದಕರು ಸರಿಯಾದ ಪಾಠ ಹೀಗಿದ್ದಿರಬಹುದೆಂದು ಊಹಿಸಿ ತಿದ್ದಿಕೊಂಡಿದ್ದಾರೆ. ಹಾಗೆಯೇ ಉತ್ತರಾರ್ಧದಲ್ಲೂ ಹಿಂದೆ ಅಕ್ಷರಗಳು ಸ್ಖಲಿತವಾಗಿದ್ದು ಆ ಸ್ಖಾಲಿತ್ಯವನ್ನು ಸರಿಪಡಿಸುವ ಯತ್ನದಲ್ಲಿ ಯಾರಾದರೊಬ್ಬರು "ಕರಿದು ಮಾಡಿದಂ" ಎಂದು ತಿದ್ದಿಕೊಂಡು, ಅನಂತರದವರು ಅದೇ ಪಾಠವನ್ನು ಅನುಸರಿಸಿಕೊಂಡು ಬಂದಿರಬಹುದಾದ ಸಂಭವವನ್ನು ತಳ್ಳಿಹಾಕುವಂತಿಲ್ಲ. ಏಕೆಂದರೆ ನಮಗೆ ದೊರೆತಿರುವ ತಾಳೆಯೋಲೆಗಳು ಮೂರು ಮಾತ್ರವೇ, ಅರಾ ಗ್ರಂಥಭಂಡಾರದ ಪ್ರತಿ, ಪುಣೆಯ ಭಂಡಾರ್ಕರ್ ಪ್ರಾಚ್ಯ ಗ್ರಂಥಭಂಡಾರದ ಪ್ರತಿ ಮತ್ತು ಮೈಸೂರರಮನೆಯ ಸರಸ್ವತೀ ಭಂಡಾರದ ಪ್ರತಿ. ಈ ಮೂರರಲ್ಲಿಯೂ ಗ್ರಂಥಪಾಠಗಳೂ ಲಿಪಿಕಾರರಿಂದಾದ ತಪ್ಪುಗಳೂ ಅಧಿಕವಾಗಿದ್ದು ಮೂರೂ ಅಸಮರ್ಪಕ ಮೂಲಗಳಾಗಿವೆ. ಅಲ್ಲದೆ ಗ್ರಂಥದ ಎರಡು ಕಡೆಗಳಲ್ಲಿ ಪದ್ಯಗಳು ಹಿಂದು ಮುಂದಾಗಿದ್ದು ಆ ಸಂಗತಿ ಮೂರೂ ಪ್ರತಿಗಳಲ್ಲಿ ಏಕಪ್ರಕಾರವಾಗಿರುವುದನ್ನು ನೋಡಿದರೆ ಆ ಮೂರಕ್ಕೂ ಮಾತೃಕೆ ಒಂದೇ ಆಗಿದ್ದಿರಬೇಕೆಂಬ ಅನುಮಾನವುಂಟಾಗುತ್ತದೆ.[4] ಬಹುಶಃ ಯಾವುದೋ ಪ್ರತಿಯಲ್ಲಿ ಮಾಡಿರಬಹುದಾದ ತಿದ್ದುಪಾಟು ಸಹಜವಾಗಿಯೇ ಮೂರೂ ಪ್ರತಿಗಳಲ್ಲಿ ಹರಿದುಬಂದಿರಬಹುದು. ನಮಗೆ ದೊರೆತಿರುವ ಪ್ರತಿಗಳೊಂದೊಂದೂ ಬೇರೆ ಬೇರೆ ಸಂಪ್ರದಾಯಕ್ಕೆ ಸೇರಿದ ಪಾಠವಾಗಿದ್ದು ಮೂರರಲ್ಲೂ ಅದೇ ಪಾಠವಿದ್ದಿದ್ದರೆ ಆಗ ಅದು ಹೆಚ್ಚು ವಿಶ್ವಸನೀಯವಾಗಿರುತ್ತಿತ್ತು. ಆದ್ದರಿಂದ ಸಮಾನಪಾಠವೆಂಬುದಕ್ಕೆ ಜೋತುಬೀಳದೆ ಅಂತಸ್ಸಂಭಾವ್ಯತೆಯ ಕಡೆಗೂ ಗಮನ ಹರಿಸಬೇಕಾಗುತ್ತದೆ.

ತನ್ನ ಪೂರ್ವಜನಾದ ಮಾಧವ ಸೋಮಯಾಜಿಯ ಬಗ್ಗೆ ಪಂಪ ಅಭಿಮಾನ ಪೂರ್ಣವಾದ ಹೊಗಳಿಕೆಯ ನುಡಿಗಳನ್ನಾಡಿದ್ದಾನೆಯೇ ಹೊರತು, ಈ ಭಾಗದಲ್ಲಾಗಲಿ ಬೇರೆ ಯಾವ ಭಾಗದಲ್ಲೇ ಆಗಲಿ ಎಲ್ಲೂ ತೆಗಳಿಕೆಯ ನುಡಿಯನ್ನಾಡಿಲ್ಲ. ಎಲ್ಲೂ ಹೀನಾಯವಾಗುವಂತಹ ಮಾತನ್ನು ಬಳಸಿಲ್ಲ. ಕೊಂಕುನುಡಿಯನ್ನು ಆಡಿಲ್ಲ. ಮಾಡಬಾರದ ಕೆಲಸವನ್ನು ಮಾಡಿದನಲ್ಲ ಎಂಬ ಪಶ್ಚಾತ್ತಾಪವಿಲ್ಲ. ಇಂಥವನ ವಂಶದಲ್ಲಿ ತಾನು ಹುಟ್ಟಿದೆನಲ್ಲ ಎಂಬ ದುಮ್ಮಾನವಿಲ್ಲ. ಪ್ರಕೃತಸಂದರ್ಭದಲ್ಲಿಯೂ

4. ಪಂಪಭಾರತ, ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆ, ಉಪೋದ್ಘಾತ, ಪುಟ viii

ಅಧ್ವರದ ಮೂಲಕ ಅವನ ಯಶಸ್ಸು ದಿಗಂತಗಳನ್ನು ವ್ಯಾಪಿಸಿತು, ತ್ರಿಲೋಕ ಪ್ರಚುರವಾಯಿತು ಎಂದು ಸೂಚಿಸಿ ಅದೇ ಉಸಿರಿನಲ್ಲಿ "ಕರಿದು ಮಾಡಿದಂ ನಿಜ ಯಶಮಂ" ಎಂದನೇಕೆ ?

ಯಶಸ್ಸಿಗೆ ಮಸಿ ಹಚ್ಚಬೇಕಾದರೆ ಅಧ್ವರಧೂಮ ಪಾಪಪೂರಿತವಾದುದೆ ?

ಹೌದು ಎಂದು ಅಂದಿನಿಂದ ಇಂದಿನವರೆಗೆ ಹಲವು ವಿದ್ವಾಂಸರು ನಂಬಿಕೊಂಡು ಬಂದಿರುವಂತಿದೆ.[5] ಆದರೆ ಇದಕ್ಕೆ ಆಧಾರವೆಲ್ಲಿ ? ಯಜ್ಞಮಾಡುವುದು ಪಾಪ ಕಾರ್ಯವೇ ?

ಯಜ್ಞವನ್ನು ವೇದಗಳಲ್ಲಿ "ಶ್ರೇಷ್ಠತಮಂ ಕರ್ಮ" ಎಂದು ಕರೆದಿದ್ದಾರೆ. ಅದಕ್ಕಿಂತ ಮಿಗಿಲಾದ ಕರ್ಮ ಬೇರೊಂದಿಲ್ಲ. ಮನುಷ್ಯಜೀವನದ ಎಲ್ಲ ಒಳ್ಳೆಯದೂ ಉದಾತ್ತವಾದುದೂ ಸರ್ವತೋಮುಖ ಪ್ರಗತಿಗೆ ಸಾಧಕವಾದುದೂ ಅದರಲ್ಲಿ ಅಡಕವಾಗುತ್ತದೆ.

'ಯಜ್' ಧಾತುವಿನಿಂದ ಬಂದದ್ದು ಯಜ್ಞ. "ದೇವಪೂಜಾ ಸಂಗತಿಕರಣ ಯಜನ ದಾನೇಷು" ಎಂದು ಅದರ ಅರ್ಥವನ್ನು ವಿವರಿಸುತ್ತಾರೆ. ದೇವಪೂಜಾ ಎಂದರೆ ಪರಮಾತ್ಮನ ಆರಾಧನೆ ; ಸಂಗತಿಕರಣವೆಂದರೆ ಸ್ನೇಹ ಸೌಹಾರ್ದ ಪರೋಪಕಾರ ಪರಸ್ಪರ ಸಹಕಾರ ಅನ್ಯೋನ್ಯತೆಗಳು ; ಯಜನವೆಂದರೆ ಆರೋಗ್ಯವರ್ಧನೆಗಾಗಿ ಶ್ರೇಯಸ್ಸಿಗಾಗಿ ಮೋಕ್ಷಪ್ರಾಪ್ತಿಗಾಗಿ ತುಪ್ಪ ಓಷಧಿ ಮೊದಲಾದ ದ್ರವ್ಯಗಳನ್ನು ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಹೋಮಮಾಡುವುದು ; ದಾನವೆಂದರೆ ಜ್ಞಾನ ಹಾಗೂ ದ್ರವ್ಯವನ್ನು ಪಾತ್ರರಲ್ಲಿ ಹಂಚುವುದು.

ವೈದಿಕರು ಪಂಚಮಹಾಯಜ್ಞಗಳನ್ನು ಅನುಷ್ಠಾನ ಮಾಡುತ್ತಿದ್ದರು. ಆ ಪಂಚ ಮಹಾಯಜ್ಞಗಳು ಬ್ರಹ್ಮಯಜ್ಞ (ಋಷಿಯಜ್ಞ), ಪಿತೃಯಜ್ಞ, ಭೂತಯಜ್ಞ ಮತ್ತು ನೃಯಜ್ಞ. ಬ್ರಹ್ಮಯಜ್ಞವೆಂದರೆ ವೇದಗಳ ಅಧ್ಯಯನ ಅಧ್ಯಾಪನ ಜ್ಞಾನಾರ್ಜನೆ ; ಪಿತೃಯಜ್ಞವೆಂದರೆ ಪಿತೃಗಳನ್ನು ಹಿರಿಯರನ್ನು ಸತ್ಕರಿಸಿ ಸಂತೃಪ್ತಿ ಪಡಿಸುವುದು ; ದೇವಯಜ್ಞವೆಂದರೆ ಅಗ್ನಿಹೋತ್ರವೇ ಮೊದಲಾದ ಹೋಮ

---

5. "ಈತನ (ಮಾಧವ ಸೋಮಯಾಜಿಯ) ಮಹಿಮೆಯಲ್ಲಿ ಪಂಪನಿಗೆ ಗೌರವ; ಆದರೆ ಯಾಗಧೂಮದಿಂದ ಅವನು ಕೀರ್ತಿಗೆ ಕಪ್ಪು ಹತ್ತಿಸಿಕೊಂಡನೆಂದು ವ್ಯಸನವೂ ಆಗಿದೆ." —ತೀ.ನಂ.ಶ್ರೀ., ಪಂಪ, ಮೈ. ವಿ. ವಿ. ಪ್ರಚಾರ ಪುಸ್ತಕ ಮಾಲೆ, ಪುಟ ೨.

"ಮಾಧವ ಸೋಮಯಾಜಿಯ ಬಗೆಗೆ ಪಂಪನಿಗೆ ಬಹಳ ಮೆಚ್ಚಿಕೆಯುಂಟು ; ಅವನು ಯಾಗ ಮಾಡಿದ್ದಕ್ಕಾಗಿ ಮಾತ್ರ ವಿಷಾದ. ಎಂತಲೇ 'ಎಲ್ಲ ಸರಿ, ಇದೊಂದರಲ್ಲಿ ಎಡವಿದ' ಎಂಬ ಧಾಟಿಯಲ್ಲಿ 'ತನ್ನಧ್ವರಧೂಮಂದೆ ಕರಿದು ಮಾಡಿದಂ ನಿಜ ಯಶಮಂ' ಎಂಬ ಉದ್ಗಾರ"— ಡಾ॥ ಸಿ. ಪಿ. ಕೆ., ಲೋಚನ, ಸಂಪುಟ ೩, ಸಂಚಿಕೆ ೨, ಪುಟ ೨೭.

ಕಾರ್ಯಗಳು ; ಭೂತಯಜ್ಞವೆಂದರೆ ಪ್ರಾಣಿಗಳಿಗೆ ಆಹಾರ ಕೊಟ್ಟು ಪ್ರೀತಿಯಿಂದ ಕಾಣುವುದು ; ನೃಯಜ್ಞವೆಂದರೆ ಅತಿಥಿಸತ್ಕಾರ.[6]

ಯಜ್ಞವೆಂದರೆ ಹಿಂಸಾತ್ಮಕವಾದುದೆಂಬ ಕಲ್ಪನೆ ಕೆಲವರಲ್ಲಿದೆ. ಆದರೆ ವೇದ ಮಂತ್ರಗಳಲ್ಲಿ ಎಲ್ಲೂ ಹಿಂಸಾತ್ಮಕವಾದ ಯಜ್ಞದ ಪ್ರಸ್ತಾಪವಿಲ್ಲ. ಅನಂತರ ಬಂದ ಮಹೀಧರ, ಉವ್ವಟರಂತಹ ಕಾಪಾಲಿಕರು ತಾಂತ್ರಿಕರು ಪೌರಾಣಿಕರುಗಳು ಮಂತ್ರ ಗಳಿಗೆ ಅಪಾರ್ಥ ಕಲ್ಪನೆ ಮಾಡಿ ಪ್ರಚುರಪಡಿಸಿದ ಕಾರಣದಿಂದ ಪ್ರಾಣಿವಧಪೂರ್ವಕ ವಾದ ಯಜ್ಞಗಳೂ ಇತಿಹಾಸದಲ್ಲಿ ನಡೆದದ್ದುಂಟು. ಆದರವು ವೇದಸಮ್ಮತವಲ್ಲ. ವೇದವಿರುದ್ಧವಾದವು. ಅಂತಹ ಆಚರಣೆಗಳು ಸಮಾಜದಲ್ಲಿ ಕಾಣಿಸಿಕೊಂಡದ್ದ ರಿಂದಲೇ ಬುದ್ಧ ಮಹಾವೀರರು ಪ್ರತಿಭಟಿಸಿ ನಿಂತುದು.

ಪ್ರಾಣಿಗಳನ್ನು ಹಿಂಸಿಸುವುದು, ಕೊಲ್ಲುವುದು. ಅವುಗಳ ರಕ್ತ ಚೆಲ್ಲುವುದು. ಆರ್ತನಾದ ಕೇಳುವುದು ರಾಕ್ಷಸಕೃತ್ಯವಾದೀತಲ್ಲದೆ ಅದೆಂದಾದರೂ ಉದಾತ್ತಕರ್ಮ ವೆನಿಸೀತೇ ? "ಶ್ರೇಷ್ಠತಮಂ ಕರ್ಮ" ಎಂತಾದೀತು ? ವೇದೋಕ್ತ ವಾಕ್ಯಗಳನ್ನು ನೋಡಿ :

"ಪ್ರಿಯಃ ಪಶೂನಾಂ ಭೂಯಾಸಂ" [ಅಥರ್ವ. 17-1-4]

ಎಲ್ಲ ಪ್ರಾಣಿಗಳಿಗೂ ನಾನು ಪ್ರಿಯನೆನಿಸುವಂತಾಗಲಿ.

"ಮಿತ್ರಸ್ಯಾಹಂ ಚಕ್ಷುಷಾ ಸರ್ವಾಣಿ ಭೂತಾನಿ ಸಮೀಕ್ಷೇ" [ಯಜು. 36-118]

ಎಲ್ಲ ಪ್ರಾಣಿಗಳನ್ನೂ ನಾನು ಸ್ನೇಹದೃಷ್ಟಿಯಿಂದ ನೋಡುವಂತಾಗಲಿ.

"ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ
ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ" [ಯಜು. 40-7]

ಯಾವ ಒಂದು ಸ್ಥಿತಿಯಲ್ಲಿ ಎಲ್ಲ ಪ್ರಾಣಿಗಳೂ ತನ್ನಂತೆಯೇ ಎಂಬ ಅರಿವು ಮೂಡುತ್ತದೆಯೋ ಅಂತಹವನಿಗೆ ಮೋಹವೆಲ್ಲಿ ಬಂತು ಶೋಕವೆಲ್ಲಿ ಬಂತು ?

—ಇದು ವೇದಗಳ ಸಂದೇಶ.

ಅಶ್ವಮೇಧ ಅಜಮೇಧ ಗೋಮೇಧಾದಿಗಳಿಗಿದ್ದ ಉದಾತ್ತವಾದ ಅರ್ಥವನ್ನು ವಿರೂಪಗೊಳಿಸಿ ಮಹೀಧರಾದಿ ವ್ಯಾಖ್ಯಾನಕಾರರು ಕಾಲಾಂತರದಲ್ಲಿ ಕುದುರೆಯನ್ನೂ

---

6. ಋಷಿಯಜ್ಞಂ ದೇವಯಜ್ಞಂ ಭೂತಯಜ್ಞಂ ಚ ಸರ್ವದಾ
ನೃಯಜ್ಞಂ ಪಿತೃಯಜ್ಞಂ ಚ ಯಥಾಶಕ್ತಿ ನ ಹಾಪಯೇತ್ [ಮನು. ೪-೨೧]
ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಶ್ಚ ತರ್ಪಣಮ್
ಹೋಮೋ ದೈವೋ ಬಲಿರ್ಭೌತೋ ನೃಯಜ್ಞೋऽತಿಥಿಪೂಜನಮ್
[ಮನು. ೩-೭೦]

ಆಡನ್ನೂ ಗೋವನ್ನೂ ಕೊಲ್ಲುವ ಯಜ್ಞವನ್ನಾಗಿ ಮಾಡಿದರು.[7] ಆ ಯಜ್ಞಗಳನ್ನು ಕ್ಷತ್ರಿಯರು ಮಾಡಿದ ನಿದರ್ಶನಗಳಿವೆಯೇ ಹೊರತು ವಿಪ್ರರು ಮಾಡಿದುದಿಲ್ಲ.

ವಿಪ್ರರಲ್ಲಿ ಆಚರಣೆಯಲ್ಲಿದ್ದ ಯಜ್ಞಗಳು ಇವು: ಔಪಾಸನಹೋಮ ವೈಶ್ವದೇವ ಇತ್ಯಾದಿ ಏಳು **ಪಾಕಯಜ್ಞಗಳು**, ಅಗ್ನಿಹೋತ್ರ ದರ್ಶಪೂರ್ಣಮಾಸ ಇತ್ಯಾದಿ ಏಳು **ಹವಿರ್ಯಜ್ಞಗಳು**, ಅಗ್ನಿಷ್ಟೋಮ ಅತ್ಯಗ್ನಿಷ್ಟೋಮ ಇತ್ಯಾದಿ ಏಳು **ಸೋಮಯಜ್ಞಗಳು**. ಈ ಇಪ್ಪತ್ತೊಂದು ಯಜ್ಞಗಳಲ್ಲಿ ಬಳಸುತ್ತಿದ್ದ ದ್ರವ್ಯಗಳು ಇವು–

ತೈಲಂ ದಧಿ ಪಯಃ ಸೋಮೋ ಯವಾಗೂರೋದನಂ ಘೃತ
ತಂಡುಲಾಃ ಫಲಮಾಪಶ್ಚ ದಶ ದ್ರವ್ಯಾಣ್ಯಕಾಮತಃ [ಗೌತಮ ಧರ್ಮಸೂತ್ರ]

ಎಣ್ಣೆ, ಮೊಸರು, ಹಾಲು, ಸೋಮಲತೆ, ಗಂಜಿ, ಅನ್ನ, ತುಪ್ಪ, ಅಕ್ಕಿ, ಹಣ್ಣು ಮತ್ತು ನೀರು—ಈ ಹತ್ತು.

---

7. ಶತಪಥಬ್ರಾಹ್ಮಣದಲ್ಲಿ ಯಾಜ್ಞವಲ್ಕ್ಯ ಮಹರ್ಷಿಗಳು ಅಶ್ವಮೇಧವನ್ನು ಕುರಿತು ಕೊಡುವ ವ್ಯಾಖ್ಯಾನವಿದು: "ಅಶ್ವೋ ವೈ ರಾಷ್ಟ್ರಂ, ರಾಷ್ಟ್ರಂ ವಾ ಅಶ್ವಮೇಧಃ, ರಾಷ್ಟ್ರಪಾಲನಮೇವ ಕ್ಷತ್ರಿಯಾಣಾಂ ಅಶ್ವಮೇಧಾಖ್ಯೋ ಯಜ್ಞೋ ಭವತಿ" [ಶ.ಕಾ. 13, ಅಧ್ಯಾಯ 1, ಬ್ರಾ. 6, ಕ. 3]. ಅಶ್ವವೆಂದರೆ ರಾಜ್ಯ. ರಾಷ್ಟ್ರಪರಿಪಾಲನೆಯೇ ಅಶ್ವಮೇಧವೆಂದು ಕ್ಷತ್ರಿಯರು ಮಾಡುತ್ತಿದ್ದ ಯಜ್ಞ. ಆದ್ದರಿಂದ ಅಶ್ವವನ್ನು ಕೊಂದು ಅದರ ಅಂಗಗಳನ್ನು ಹೋಮಕುಂಡದಲ್ಲಿ ಹಾಕುವುದಲ್ಲ.

ಅಜಮೇಧವೆಂದರೆ ಬೀಜಗಳಿಂದ ಮಾಡುವ ಭೈಷಜ್ಯ ಯಜ್ಞ. ಅಜವೆಂದರೆ ಬೀಜ ವಿಶೇಷ, ಏಳು ವರ್ಷ ಹಿಂದಿನ ಬತ್ತ.

''ಅಜ ಸಂಜ್ಞಾನಿ ಬೀಜಾನಿ ಛಾಗಾ ನೋ ಹನ್ತುಮರ್ಹಥ
ನೈಷ ಧರ್ಮಃ ಸತಾಂ ದೇವಾಃ ಯತ್ರ ವಧ್ಯೇತ ವೈ ಪಶುಃ
[ಮ.ಭಾ., ಶಾಂತಿ., ಅಧ್ಯಾ. ೩೩೭]

ಅಜ ಎಂಬುದು ಬೀಜಗಳು. ಆಡನ್ನು ಬಲಿಕೊಡುವುದು ಸಲ್ಲದು. ಪಶುವಧೆ ಮಾಡುವುದು ಎಂದಿಗೂ ಸತ್ಪುರುಷರ ಧರ್ಮವೆನಿಸದು.

ಇದೇ ವಿಷಯವನ್ನು ಕುರಿತು ವಿಷ್ಣುಶರ್ಮ ತನ್ನ ಪಂಚತಂತ್ರದಲ್ಲಿ ಹೀಗೆ ಹೇಳುತ್ತಾನೆ: ''ಯೇ ತೇಽಪಿ ಯಾಜ್ಞಿಕಾಃ ಯಜ್ಞಕರ್ಮಣಿ ಪಶೂನ್ ವ್ಯಾಪಾದಯನ್ತಿ ತೇ ಮೂರ್ಖಾಃ. ಪರಮಾರ್ಥಂ ಶ್ರುತೇಃ ನ ಜಾನನ್ತಿ. ತತ್ರ ಕಿಲ್ಯೆತದುಕ್ತಂ ಅಜೈರ್ಯಜ್ಞೇಷು ಯಷ್ಟವ್ಯಮಿತಿ. ಅಜಾಸ್ತಾವದ್ವ್ರೀಹಯಃ ಸಾಪ್ತವಾರ್ಷಿಕಾಃ ನ ಪುನಃ ಪಶುವಿಶೇಷಃ.'' ಯಾವ ಯಾಜ್ಞಿಕರು ಯಜ್ಞದಲ್ಲಿ ಪಶುಗಳನ್ನು ಕೊಲ್ಲುತ್ತಾರೋ ಅವರು ಮೂರ್ಖರು. ಅವರು ವೇದದ ಪರಮಾರ್ಥವನ್ನು ಕಾಣರು. ಅಜಗಳ ಮೂಲಕ ಯಜ್ಞ ಮಾಡಬೇಕೆಂದು ಅದರಲ್ಲಿ ಹೇಳಿದೆಯಷ್ಟೆ? ಅಜಾಃ ಎಂದರೆ ಏಳು ವರ್ಷದ ಬತ್ತವೇ ಹೊರತು ಪಶುವಿಶೇಷವಲ್ಲ.

ಅಂತೆಯೇ ಗೋಮೇಧವೆಂದರೆ ಗೋಸಂವರ್ಧನೆ ಅಥವಾ ಇಂದ್ರಿಯನಿಗ್ರಹ ಅಥವಾ ಭೂಮಿಯನ್ನು ಕೃಷಿ ಮಾಡುವುದು ಎಂಬ ಅರ್ಥವಾದೀತೇ ಹೊರತು ಗೋವಧೆ ಮಾಡುವುದಲ್ಲ.

"ಘೃತ ಕ್ಷೀರ ದಧಿ ನಾಳಿಕೇರತೋಯಾಮ್ರರಸ ಗಂಧೋದಕಾದಿಗಳಿಂದೆ ಮಾಡುವ ಸವನಮುಂ..." ಎಂದು ಪಂಪನೂ ಆದಿಪುರಾಣದಲ್ಲಿ ಸೂಚಿಸಿದ್ದಾನೆ [೧೫–೧೫ರ ನಂತರದ ಗದ್ಯ].

ವೈದಿಕಧರ್ಮವನ್ನು ಚಾಚೂ ತಪ್ಪದೆ ಸಾಂಪ್ರದಾಯಿಕವಾಗಿ ಆನುವಂಶಿಕವಾಗಿ ಅನುಷ್ಠಾನಮಾಡಿಕೊಂಡು ಬಂದಂತಹ ಮನೆತನಗಳು ಅಂದಿನಿಂದ ಇಂದಿನವರೆಗೂ ನಡೆದುಬಂದಿವೆ. ಧಾರ್ಮಿಕ ಕರ್ಮಗಳನ್ನಾಚರಿಸುವ ಸಂದರ್ಭದಲ್ಲಿ ವೈದಿಕರು ಇಂದಿಗೂ ಉಚ್ಚರಿಸುವ ಪ್ರವರ ಗೋತ್ರಾದಿಗಳು ಆ ಅನೂಚಾನತೆಯನ್ನು ತೋರಿಸುತ್ತದೆ.

ಪಂಪ ಹೇಳುತ್ತಿರುವುದು ಸಾವಿರಾರು ವರ್ಷಗಳ ಹಿಂದಿನ ಮಾತು. ಅಕಲುಷಿತವಾದ ವೈದಿಕಧರ್ಮವನ್ನು ಅನುಷ್ಠಾನಮಾಡುತ್ತಿದ್ದವರು ಬಹು ಸಂಖ್ಯೆಯಲ್ಲಿದ್ದ ಕಾಲವದು. ವಿದ್ಯಾಪಾರಂಗತರಾದ ಅವರು ರಾಜಾಶ್ರಯವನ್ನರಸಿಕೊಂಡು ಹೊರ ಹೋಗುತ್ತಿದ್ದುದು ವಾಡಿಕೆ. ಹಳೆಯ ಮೈಸೂರು ಸಂಸ್ಥಾನದಲ್ಲಿ ರಾಜಾಶ್ರಯವನ್ನು ಬಯಸಿ ಆಂಧ್ರದಿಂದ ಬಂದು ಅಗ್ರಹಾರಗಳಲ್ಲಿ ನೆಲಸಿದ ಕುಟುಂಬಗಳೆಷ್ಟೋ! ಅವರ ತಲೆಮಾರಿನ ಜನ ಇವತ್ತಿಗೂ ಅಲ್ಲಲ್ಲಿ ಇದ್ದಾರೆ.

ಅಗ್ರಹಾರಗಳಲ್ಲಿ ಯಜ್ಞಗಳು ನಡೆಯುತ್ತಿದ್ದ ಕಾಲದಲ್ಲಿ ವೇದಮಂತ್ರಗಳ ನಿನಾದ ಕೇಳಿಬರುತ್ತಿತ್ತೇ ಹೊರತು ಕೊಲೆಗೀಡಾದ ಪ್ರಾಣಿಗಳ ಆರ್ತನಾದವಲ್ಲ. ಹವಿರ್ಧೂಮದ ಪರಿಮಳ ದಶದಿಕ್ಕುಗಳಿಗೂ ಹರಡುತ್ತಿತ್ತೇ ಹೊರತು ಸುಟ್ಟ ಮಾಂಸದ ದುರ್ಗಂಧವಲ್ಲ. ಪಂಪನೇ ಮಾಡಿರುವ ಧರ್ಮಾವುರ ಅಗ್ರಹಾರದ ವರ್ಣನೆ ನೋಡಿ :

''ದೆಸೆ ಮಖಧೂಮದಿಂ ದ್ವಿಜರ ಹೋಮದಿನೊಳ್ಗಿಱ್ ಹಂಸಕೋಕಸಾ
ರಸ ಕಳನಾದದಿಂದೊಳಗೆ ವೇದನಿನಾದದಿನೆತ್ತಮೆಯ್ದೆ ಶೋ-
ಭಿಸೆ ಸುರಮಥ್ಯಮಾನಕ್ಷುಭಿತಾರ್ಣದ[ವ?]ಘೋಷದಂತೆ ಘೂ-
ರ್ಣಿಸುತಿರಲೀ ಗುಣಾರ್ಣವನ ಧರ್ಮದ ಧರ್ಮಪುರಂ ಮನೋಹರಂ.''

[ವಿ.ವಿ. ೧೪–೫೭]

ಪೂರ್ವೋಕ್ತ ವೈದಿಕ ಯಜ್ಞಗಳಲ್ಲಿ ಸೋಮಯಜ್ಞಗಳನ್ನು ಮಾಡುವವರನ್ನು **ಸೋಮಯಾಜಿ** ಎಂದು ಕರೆಯುತ್ತಾರೆ. ಪಂಪನ ಪೂರ್ವಜ ಮಾಧವ, ಸೋಮ-ಯಜ್ಞಗಳನ್ನು ಮಾಡುತ್ತಿದ್ದನಾದುದರಿಂದ **ಮಾಧವ ಸೋಮಯಾಜಿಯಾದ.**

ಆದರೆ ದಿಗ್ವನಿತೆಯ ಮಾಟದ ಕುರುಳಾದದ್ದು, ತ್ರೈಭುವನಕಾಂತೆಯ ಕಂಠಾಭರಣವಾದದ್ದು ಮಾಧವ ಸೋಮಯಾಜಿ ಮಾಡಿದ **ಅಧ್ವರದ** ಧೂಮವಲ್ಲವೆ? ಅಧ್ವರವೆಂದರೇನು ? "ಧ್ವರ ಹಿಂಸಾಯಾಂ"—ಧ್ವರ ಧಾತುವಿಗೆ ಹಿಂಸೆಯೆಂದರ್ಥ. "ಧ್ವರತಿ ವಧಕರ್ಮ" (ನಿಘಂಟು ೨-೯) ವಧೆ ಮಾಡುವುದು. "ತತ್‌ಪ್ರತಿಷೇಧೋಽ-ಧ್ವರಃ"—ವಧೆ ಮಾಡುವುದನ್ನು ಪ್ರತಿಷೇಧಿಸುವುದು ಯಾವುದೋ ಅದು ಅಧ್ವರ.

ಆದುದರಿಂದ ಯಾವ ಯಜ್ಞ ಪ್ರಾಣಿಬಲಿಯಿಂದ ಕೂಡಿಲ್ಲವೋ, ಹಿಂಸಾರಹಿತ ವಾದುದೋ ಅದು ಅಧ್ವರ. ಹಾಗಾಗಿ ಅಹಿಂಸಾತ್ಮಕವಾದ ಅಧ್ವರಧೂಮ ಶುದ್ಧಿ ಕಾರಕವೂ ಪವಿತ್ರಾತ್ಮಕವೂ ಶ್ರೇಯಸ್ಕರವೂ ಆದುದೇ ಹೊರತು ಅಯಶಸ್ಕರ ವಾದುದಲ್ಲ. ಅಧ್ವರಗಳನ್ನು ಮಾಡಿದುದರಿಂದ ಅವನ ಕೀರ್ತಿ ಮತ್ತಷ್ಟು ಅಧಿಕ ವಾಯಿತು, ದಿಗಂತವ್ಯಾಪಿಯಾಯಿತು, ತ್ರಿಲೋಕಗಳನ್ನು ಸುತ್ತುವರಿಯಿತು ಎಂಬು ದನ್ನು ಸೂಚಿಸಲು ಅಧ್ವರಧೂಮ ದಿಗಂಗನೆಯ ಮಾಟದ ಕುರುಳಾಯಿತೆಂದೂ ತ್ರಿಭುವನಕಾಂತೆಯ ಕಂಠಾಭರಣವಾಯಿತೆಂದೂ ರೂಪಣಮಾಡಿದ್ದಾನೆ ಪಂಪ.

ಪ್ರಕೃತಪ್ರಸಂಗದಲ್ಲಿ ಪಂಪ ಬಾಣನಿಂದ ಪ್ರೇರಿತನಾಗಿಯೇ ಈ ವರ್ಣನೆ ಯನ್ನು ಮಾಡಿರುವಂತೆ ಕಾಣುತ್ತದೆ. ಕಾದಂಬರಿಯ ಪ್ರಸ್ತಾವನೆಯಲ್ಲಿ ಬಾಣ ತನ್ನ ತಂದೆ ಚಿತ್ರಭಾನುವಿನ ಪ್ರಶಂಸೆ ಮಾಡುತ್ತಾ "ಯಾರ ಅಧ್ವರದ ಧೂಮ ಸಂಚಯ ದಿಗ್ವನಿತೆಯರ ಲಲಾಟದ ಮುಂಗುರುಳಾಯಿತೋ ತ್ರಯೀವಧುವಿನ ಕಿವಿಯಲ್ಲಿ ತಮಾಲಪಲ್ಲವವಾಯಿತೋ ಆ ಧೂಮಸಂಚಯ, ಸ್ವಯಂ ಕಪ್ಪಗಿದ್ದರೂ, ಮೊದಲೇ ಬೆಳ್ಳಗಿದ್ದ ಚಿತ್ರಭಾನುವಿನ ಕೀರ್ತಿಯನ್ನು ಮತ್ತಷ್ಟು ಬೆಳ್ಳಗಾಗಿಸಿತು" ಎನ್ನುತ್ತಾನೆ.[8] ಅಲ್ಲಿಯೂ ಅಧ್ವರಧೂಮ ಇಲ್ಲಿಯೂ ಅಧ್ವರಧೂಮ. ಅಲ್ಲಿ ದಿಗ್ವನಿತೆಗಳ ಲಲಾಟದ ಕುರುಳಾಗಿದ್ದರೆ ಇಲ್ಲಿ ದಿಗ್ವನಿತೆಯ ಕೇಶರಾಶಿ. ಅಲ್ಲಿ ತ್ರಯೀ ವಧುವಿನ ಕರ್ಣತಮಾಲಪಲ್ಲವವಾಗಿದ್ದರೆ ಇಲ್ಲಿ ತ್ರೈಭುವನಕಾಂತೆಯ ಕಂಠಾಭರಣ. ಈ ಕಿಂಚಿನ್ಮಾತ್ರ ವ್ಯತ್ಯಾಸವನ್ನು ಬಿಟ್ಟರೆ ವಸ್ತು ಉದ್ದೇಶ ಆನುಪೂರ್ವಿಗಳೆಲ್ಲವೂ ಎರಡರಲ್ಲೂ ಒಂದೇ ಆಗಿರುವುದರಿಂದ ಚಿತ್ರಭಾನುವಿನ ಕೀರ್ತಿಯನ್ನು ಶುಕ್ಲತರ ವಾಗಿಸಿರುವಂತೆ ಪ್ರಶಸ್ತವಾದ ಅಧ್ವರಧೂಮ ಮಾಧವಸೋಮಯಾಜಿಯ ಕೀರ್ತಿ ಯನ್ನು ಮತ್ತಷ್ಟು ಬಿಳುಪೇರಿಸಿರಬೇಕು ಎನಿಸುತ್ತದೆ.

"ವಿಪ್ರರು ಮಾಡುತ್ತಿದ್ದ ಯಜ್ಞಯಾಗಾದಿಗಳು ಹಿಂಸಾತ್ಮಕವಾಗಿರುತ್ತಿದ್ದುದ ರಿಂದ ವಿಪ್ರಧರ್ಮದಲ್ಲಿ ಜಿಹಾಸೆ ಹುಟ್ಟಿ ಪಂಪನ ತಂದೆ ಜೈನಧರ್ಮವನ್ನು ಸ್ವೀಕರಿ ಸಿದನೆಂ"ಬ ಭಾವನೆ ಕೆಲವರಲ್ಲುಂಟು. ಆದರೆ ಅದಕ್ಕೆ ಕಾವ್ಯದಲ್ಲಿ ಎಲ್ಲಿಯೂ ಆಧಾರವಿಲ್ಲ. ಪಂಪನ ಕಾಲದಲ್ಲಿ ಜೈನ ಜೈನೇತರ ಎಂಬ ವೈಷಮ್ಯವಿರಲಿಲ್ಲ. ಜೈನಧರ್ಮವು ಶ್ರೇಷ್ಠವೆಂಬ ಪ್ರಶಂಸೆಯಿದೆಯಾದರೂ ವಿಪ್ರಧರ್ಮ ಕನಿಷ್ಠವೆಂಬ ತಿರಸ್ಕಾರಭಾವನೆ ಎಲ್ಲೂ ಇಲ್ಲ. ಜೈನಧರ್ಮ ಒಂದು ರೀತಿಯಿಂದ ಶ್ರೇಷ್ಠವಾದರೆ

---

8. ದಿಶಾಮಲೀಕಾಲಕಭಂಗತಾಂ ಗತಃ
ತ್ರಯೀವಧೂಕರ್ಣತಮಾಲಪಲ್ಲವಃ
ಚಕಾರ ಯಸ್ಯಾಧ್ವರಧೂಮಸಂಚಯೋ
ಮಲೀಮಸಃ ಶುಕ್ಲತರಂ ನಿಜಂ ಯಶಃ

ವಿಪ್ರಧರ್ಮ ಮತ್ತೊಂದು ರೀತಿಯಿಂದ ಶ್ರೇಷ್ಠವೆನಿಸಿತ್ತು. ಪಂಪನ ಮಾತುಗಳಿಂದಲೇ ಇದು ವೇದ್ಯವಾಗುತ್ತದೆ.

ಜೈನಧರ್ಮ ಅಹಿಂಸಾಪ್ರಧಾನವಾದದ್ದು, ನಿಜ. ಆದರೆ ಅಹಿಂಸೆ ಜೈನ ಧರ್ಮಕ್ಕೆ ಮಾತ್ರ ಮೀಸಲಾದುದಲ್ಲ. ವಿಶ್ವದ ಎಲ್ಲ ಶ್ರೇಷ್ಠಧರ್ಮಗಳ ಅಡಿಪಾಯವೂ ಅಹಿಂಸೆಯೇ. ವಿಪ್ರಧರ್ಮದಲ್ಲೂ ಅಗ್ರಗಣ್ಯವಾಗಿ ಬರುವ ಅನುಷ್ಠೇಯ ತತ್ತ್ವ ಅಹಿಂಸೆ. ಅಹಿಂಸೆಯ ನಂತರವೇ ಸತ್ಯ ಅಸ್ತೇಯ ಅಪರಿಗ್ರಹ ಶೌಚ ಇಂದ್ರಿಯನಿಗ್ರಹ ಇತ್ಯಾದಿ ತತ್ತ್ವಗಳು ಬರುವುದು.[9] ವೈದಿಕಧರ್ಮದಲ್ಲಿ ಅನುಷ್ಠಿತವಾಗುವ ಈ ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಪರಿಗ್ರಹಗಳನ್ನೇ ಜೈನಧರ್ಮದಲ್ಲಿಯೂ ಹೇಳಿರುವುದು. ಇದಲ್ಲದೆ ಕರ್ಮಸಿದ್ಧಾಂತ ಮತ್ತು ಪುನರ್ಜನ್ಮಸಿದ್ಧಾಂತಗಳಲ್ಲಿಯೂ ಜೈನಧರ್ಮಕ್ಕೂ ವಿಪ್ರಧರ್ಮಕ್ಕೂ ಸಮಾನತೆ. ಆದ್ದರಿಂದಲೇ ಪಂಪ "ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ, ನಂಬಲೇ ಮಾತೋ, ಜಿನೇಂದ್ರ ಧರ್ಮಮೆ ವಲಂ ದೊರೆ ಧರ್ಮದೊಳ್" ಎಂದಿರುವುದು. ಇಲ್ಲಿ ದೊರೆ (ಸಮಾನ) ಎಂಬ ಮಾತು ಗಮನಾರ್ಹ.

ಜೈನಧರ್ಮ ಸ್ವೀಕಾರದಿಂದ ಬ್ರಾಹ್ಮಣ್ಯಕ್ಕೆ ಯಾವ ಬಾಧೆಯೂ ಉಂಟಾಗಲಿಲ್ಲ. ಬ್ರಾಹ್ಮಣ್ಯದೊಡನೆ ಜೈನಧರ್ಮ ಸೇರಿದುದು ಹಾಲಿಗೆ ಜೇನು ಸೇರಿದಂತಾಯಿತು. ಒಂದಕ್ಕೊಂದು ಪೂರಕವಾಯಿತೇ ಹೊರತು ಮಾರಕವಾಗಲಿಲ್ಲ. ಆದ್ದರಿಂದಲೇ ತನ್ನ ತಂದೆ ಭೀಮಪಯ್ಯ "ತಜ್ಜಾತಿಯನುತ್ತರೋತ್ತರಮೆ ಮಾಡಿ ನೆಗಟ್ಚಿದನಿಂತಿರೆ ಆತ್ಮವಿಖ್ಯಾತಿಯನ್" [ವಿ.ವಿ. ೧೪-೪೮] ಎಂದು ಪಂಪ ಮೆಚ್ಚಿಕೆ ಸೂಚಿಸಿರುವುದು.

ಪಂಪನಿಗೂ ತನ್ನನ್ನು ವಿಪ್ರನೆಂದು ಕರೆದುಕೊಳ್ಳುವುದಕ್ಕೆ ಹೆಮ್ಮೆ.[10]

---

9. "ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ" (ಮನು. 10-63)
"ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಂ...." (ಭ.ಗೀ. 16-2)
"ಅಹಿಂಸಾ ಸತ್ಯಮಸ್ತೈನಂ ಸವನೇಕ್ಷೂದಕೋಪಸ್ಪರ್ಶನಂ"
(ಬೋಧಾಯನ ಧರ್ಮಸೂತ್ರ 3-10-14)
"ಅಹಿಂಸಾ ಸತ್ಯಮಸ್ತೇಯ ಬ್ರಹ್ಮಚರ್ಯಾಪರಿಗ್ರಹಾ ಯಮಾಃ"
(ಪಾತಂಜಲಯೋಗಸೂತ್ರ)
"ಅಹಿಂಸಾ ಸತ್ಯಮಸ್ತೇಯಮಸಂಗೋ ಹ್ರೀರಸಂಚಯಃ...." (ಮಹಾಭಾಗವತ)
"ಅಹಿಂಸಾ ಪರಮೋ ಧರ್ಮಃ...." (ಮಹಾಭಾ. ವನ. 207-24)
"ಅಹಿಂಸಾ ಪರಮೋ ಧರ್ಮೋ ಹಿಂಸಾ ಚಾಧರ್ಮಲಕ್ಷಣಾ
(ಮಹಾಭಾ. ಆಶ್ವ. 43-21)

10. ಈಗ್ಗೆ ಕೇವಲ ೫೦ ವರ್ಷಗಳ ಹಿಂದಿನವರೆಗೆ ಕರ್ನಾಟಕದಲ್ಲಿ ತಮ್ಮನ್ನು ಬ್ರಾಹ್ಮಣರೆಂದು ಕರೆದುಕೊಳ್ಳುವುದಕ್ಕೆ ಅನ್ಯಪಂಗಡದವರಿಗೆ ತುಂಬ ಉತ್ಸಾಹವಿತ್ತು. ನಂಜನಗೂಡು

"ಪಂಪಂ ಧಾತ್ರೀವಳಯನಿಳಿಂಪಂ" ! ಅವನು 'ಭೂಸುರ', ವತ್ಸಗೋತ್ರೋದ್ಭವ. ಜೈನಬ್ರಾಹ್ಮಣ. ಜೈನಧರ್ಮದ ಶ್ರೇಷ್ಠತೆ ಬ್ರಾಹ್ಮಣ್ಯದ ಶ್ರೇಷ್ಠತೆ ಎರಡೂ ಅವನಲ್ಲಿ ಮೈಗೂಡಿಬಂದುವು. ಆ ಕಾರಣದಿಂದಲೇ ಅವನಿಗೆ ಅರಿಕೇಸರಿ ಅಗ್ರಹಾರ ವನ್ನು ದಾನಮಾಡಿದುದೆಂದು ತೋರುತ್ತದೆ.

ಮಾಧವ ಸೋಮಯಾಜಿಯಲ್ಲಿ ಬೆರಳಿಟ್ಟು ತೋರಿಸುವಂತಹ ಯಾವ ದೋಷವೂ ಇರಲಿಲ್ಲ. ಬ್ರಾಹ್ಮಣ್ಯಕಾರಣದಿಂದ ತಿರಸ್ಕಾರಭಾವನೆಯಾಗಲಿ, ತಾನು ಜೈನನಾದುದರಿಂದ ಪೂರ್ವಜನಿಗಿಂತ ತಾನು ಮೇಲೆಂಬ 'ಅಹಂ' ಆಗಲಿ ಪಂಪನಿಗೆ ಇದ್ದಂತಿಲ್ಲ. ಪೂರ್ವಜನಲ್ಲಿರುವ ದೋಷವಲ್ಲದ ದೋಷವನ್ನು ಸೂಚಿಸಬೇಕೆಂಬ ಉದ್ದೇಶವೂ ಅವನಿಗೆ ಇದ್ದಂತಿಲ್ಲ. ಹಾಗಾಗಿ "ಕರಿದು ಮಾಡಿದಂ ನಿಜ ಯಶಮಂ" ಎನ್ನಲು ಯಾವ ಅಂತಸ್ಸಂಭಾವ್ಯತೆಯೂ ಗೋಚರಿಸದು, ಆದ್ದರಿಂದ 'ಕರಿದು' ಎಂಬ ಶಬ್ದ ಪ್ರತಿನಿಧಾನವಾಗಿರಬಹುದೇನೊ ? ಮೂಲತಃ ಅಲ್ಲಿ ಅನ್ಯ ಶಬ್ದವಿದ್ದಿರ ಬಹುದು. ಅದು ಪ್ರಾ॥ ಡಿ.ಎಲ್.ಎನ್. ಅವರು ಹೇಳುವಂತೆ "ಕರಮೆ" ಆಗಿರ ಬಹುದು, ಅಥವಾ ಡಾ॥ ಎಲ್. ಬಸವರಾಜು ಅವರು ಹೇಳುವಂತೆ "ಹಿರಿದು" ಆಗಿರಬಹುದು. ಹಿರಿದು ಎಂಬುದು ಪಂಪನ ಕಾಲದ ಪದವಲ್ಲವಾದುದರಿಂದ, 'ಲೋಚನ'ದ ಸಂಪಾದಕರು ಸೂಚಿಸಿರುವಂತೆ "ಪಿರಿದು" ಆಗಿರಬಹುದು. "ಪಿರಿದು ಮಾಡಿದಂ ನಿಜ ಯಶಮಂ" ಎಂಬುದೇ ಹೆಚ್ಚು ಸಂಭವನೀಯ.

---

ಚಾಮರಾಜನಗರಗಳ ಸುತ್ತಮುತ್ತಲ ಪ್ರದೇಶಗಳಲ್ಲಿ ಮಡಿವಂತ ವೀರಶೈವರಿಗಾಗಿ ಇದ್ದ 'ವೀರಶೈವ ಬ್ರಾಹ್ಮಣರ ಕಾಫೀ ಕ್ಲಬ್' ಎಂಬುದು ಊರುಗಳಲ್ಲಿ ಸಂತೆಗಳಲ್ಲಿ ಜಾತ್ರೆಗಳಲ್ಲಿ ಕಂಡುಬರುತ್ತಿದ್ದ ದೃಶ್ಯ. ವಿಶ್ವಕರ್ಮರಿಗೆ ತಮ್ಮನ್ನು ವಿಶ್ವಕರ್ಮ ಬ್ರಾಹ್ಮಣರೆಂದು ಕರೆದು ಕೊಳ್ಳುವುದರಲ್ಲಿ ಹೆಮ್ಮೆ. ಮಿರ್ಜಾ ಇಸ್ಮಾಯಿಲ್ ಮೈಸೂರು ಸಂಸ್ಥಾನದ ದಿವಾನರಾಗಿದ್ದಾಗ, 1930ರ ಫೆಬ್ರವರಿ 16ರಂದು ಉದ್ಘಾಟಿಸಿದ ಜೈನಬ್ರಾಹ್ಮಣ ವಿದ್ಯಾರ್ಥಿ ನಿಲಯ ಮೈಸೂರಿನ ಝಾನ್ಸಿ ಲಕ್ಷ್ಮೀಬಾಯಿ ರಸ್ತೆಯಲ್ಲಿ ಚಾಮುಂಡಿಪುರದ ಭಾಗದಲ್ಲಿ ಇಂದಿಗೂ ಸಾಕ್ಷಿಯಾಗಿದೆ.

# ಭಾರತಸಿಂಧುರಶ್ಮಿಯಲ್ಲಿಯ ಮನುಗಳ ಸಾಧನೆ*

—ಪ್ರೊ॥ ಆರ್. ಜಿ. ಕುಲಕರ್ಣಿ

"ಅಪ್ಸುಜ್ಯೋತಿಃ ಪ್ರತಿಷ್ಠಿತಂ
ಜ್ಯೋತಿಷ್ಯಾಪಃ ಪ್ರತಿಷ್ಠಿತಾ...." —ತೈತ್ತಿರೀಯೋಪನಿಷತ್ತು-III-6.

[ಅಪ್-ನೀರಿನಲ್ಲಿ ಜ್ಯೋತಿ ಪ್ರತಿಷ್ಠಿತವಾಗಿದೆ ; ಜ್ಯೋತಿಯಲ್ಲಿ ಅಪ್-ಪ್ರತಿಷ್ಠಿತವಾಗಿದೆ.]

ಭಾರತಸಿಂಧುರಶ್ಮಿ ಮಹಾಕಾವ್ಯ ಕರ್ತೃ ಶ್ರೀ ವಿನಾಯಕ ಕೃಷ್ಣ ಗೋಕಾಕರು ಶ್ರೀ ಬೇಂದ್ರೆಯವರ 'ಸಮರಸವೇ ಜೀವನ'ವೆಂಬ ಸೂಕ್ತಿಯನ್ನೆತ್ತಿಕೊಂಡು ಒಂದು ಬೃಹತ್ ಕಾದಂಬರಿಯನ್ನೇ ರಚಿಸಿ ಆಧುನಿಕ ಜಗತ್ತಿನ ವೈವಿಧ್ಯಪೂರ್ಣ ವಿಸ್ತಾರ ಜೀವನದಲ್ಲಿಯೂ ಮೂಲಭೂತವಾಗಿ ಸಾಮರಸ್ಯವೇ ಸ್ಪಂದಿಸುತ್ತಿರುವುದನ್ನು ಗುರುತಿಸಿದರು. ಈಗ "ಭಾರತ ಸಿಂಧು ರಶ್ಮಿ"ಯಂಥ ಮಹಾಕಾವ್ಯ ಸೃಷ್ಟಿಸಿ ಭಾರತೀಯ ಜೀವನ ಜಲರಾಶಿಯಲ್ಲಿ ಪ್ರತಿಷ್ಠೆಗೊಂಡ, ಪ್ರತಿಷ್ಠಿತವಾಗುತ್ತಲಿರುವ, ಪ್ರತಿಷ್ಠಿತವಾಗಲಿರುವ ಜ್ಞಾನರಶ್ಮಿಯ-ಪ್ರಜ್ಞಾರಶ್ಮಿಯ ದರ್ಶನ ನೀಡಿದ್ದಾರೆ.

ವೈದಿಕ ಋಷಿಗಳು ಕಂಡ ಇರುವಿಕೆ ಸತ್—ಎಂಬುದು ಭೂಃ, ಭುವಃ, ಸುವಃ, ಮಹಃ, ಜನಃ, ತಪಃ, ಸತ್ಯಂ–ಎಂಬ ಏಳು ನೆಲೆಗಳಲ್ಲಿ ಎತ್ತರ-ಬಿತ್ತರ ಪಡೆದಿದೆ. ಈ ಏಳು ನೆಲೆಗಳಲ್ಲಿ ಪರಸ್ಪರ ವೈರುಧ್ಯವಿಲ್ಲ, ಇವು ಖಂಡಿತವಾದ–ಪರಸ್ಪರ ಅಸಂಬದ್ಧವಾದ ನೆಲೆಗಳಲ್ಲ ; ಏಕೆಂದರೆ ಇವುಗಳಲ್ಲಿ ಚಿತ್ ಹಾಗೂ ಆನಂದ ಗಳು–ಜ್ಞಾನಶಕ್ತಿ, ಇಚ್ಛಾಶಕ್ತಿ, ಆನಂದಶಕ್ತಿ ಪ್ರಕಾಶಗಳು ಓತಪ್ರೋತವಾಗಿವೆ. ಇದೇ ಸತ್-ಚಿತ್-ಆನಂದಗಳ ಅಖಂಡ ತ್ರಿಧಾತು ; ಆತ್ಮನೆಂದು, ಬ್ರಹ್ಮನೆಂದು, ಪುರುಷೋತ್ತಮನೆಂದು, ಓಂಕಾರನೆಂದು-ಅಂದರೆ ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯವೆಂಬ ನಾಲ್ಕು ಅವಸ್ಥೆಗಳಲ್ಲಿ ಸದಾ ಜಾಗೃತವಾದ ಬ್ರಹ್ಮಚೈತನ್ಯವೆಂದು ಉಪಾಸ್ಯವಾಗಿದೆ. ಆದರೆ ಈ ಉಪಾಸ್ಯದೇವತೆಯ ಉಪಾಸನೆಗೆ ಮನಸ್ಸಿನ ಆಚೆಗಿನ-ವಿಜ್ಞಾನ–ಅಥವಾ ಮಹತ್ತಿನ ನೆಲೆಗೆ ಇಂದಿನ ಮಾನವನು ಏರಬೇಕು–ಅಲ್ಲಿಯೇ ನೆಲೆಗೊಳ್ಳಬೇಕು ಎಂಬುದೇ ಶ್ರೀ ಅರವಿಂದರ ದಿವ್ಯಜೀವನದ ದರ್ಶನ. ಇಂಥ ವಿಜ್ಞಾನವೇ ಮಾನವನ ಸಹಜ ನೆಲೆಯಾಗುವ ದರ್ಶನಕ್ಕೆ ವೈದಿಕ ವಿಶ್ವಾಮಿತ್ರ ಋಷಿಯ ಜೀವನವನ್ನು ಪ್ರತಿಮೆಯನ್ನಾಗಿಸಿಕೊಂಡು ಶ್ರೀ ವಿನಾಯಕರು 'ಭಾರತ

---

* ಬಿ.ಎಂ.ಶ್ರೀ. ಪ್ರತಿಷ್ಠಾನದ ಆಶ್ರಯದಲ್ಲಿ 19–12–86ರಂದು ನಡೆದ ಡಾ॥ ಶಂ.ಬಾ. ಜೋಶಿ ಗೌರವ ದತ್ತಿ ಉಪನ್ಯಾಸ.

ಸಿಂಧು ರಶ್ಮಿ' ಕಾವ್ಯ ಸೃಷ್ಟಿಸಿದರು. ಸ್ವಾಯಂಭುವ ಮನುವಿನಿಂದ ಪ್ರಾರಂಭವಾಗಿ, ವೈವಸ್ವತ ಮನ್ವಂತರದಲ್ಲಿ ಆರ್ಯಪ್ರಜ್ಞೆ-ಎಲ್ಲ ಜೀವನ ಹಾಗೂ ಪ್ರಜ್ಞೆಗಳ ಮೂಲ ದಲ್ಲಿದ್ದ ಆನಂದಸ್ವರೂಪ ಸಾಕ್ಷಾತ್ಕಾರ ಮಾಡಿಕೊಂಡು ವಿಶ್ವಾಮಿತ್ರರ ಕಾಲದಲ್ಲಿ ಆರ್ಯ-ದ್ರಾವಿಡ ಸಂಸ್ಕೃತಿ ನಾಗರಿಕತೆಗಳ ಸಮನ್ವಯ ಸಿದ್ಧಿಯನ್ನು ಪಡೆದ ಕತೆ ಈ ಕಾವ್ಯದಲ್ಲಿ ಮೈದಾಳಿದೆ. ಜೊತೆಗೆ ಈ ಸಮನ್ವಯವು ಇಡೀ ಭೂಮಂಡಲದಲ್ಲಿ ಮಾನವಜೀವನದ ಪರಿವರ್ತನೆಗೆ-ದಿವ್ಯಜೀವನಕ್ಕೆ ಪೂರ್ವಭೂಮಿಕೆಯಾಗಿ ನಿಲ್ಲುತ್ತದೆ.

ಇಂಥದೊಂದು ವಿಸ್ತಾರ ದರ್ಶನಸಿದ್ಧಿಯಲ್ಲಿ ಸ್ವಾಯಂಭುವ ಹಾಗೂ ವೈವಸ್ವತ ಮನುಗಳ ಸಾಧನೆಯ ಒಳನೋಟ ಪ್ರಸ್ತುತ ಉಪನ್ಯಾಸದ ವಸ್ತು.

....ಏರುವನು ಮುಗಿಲೆತ್ತರಕೆ
ನರತ್ಯಾಗದಿಂದಾದಿ ಮನು ಸ್ವಾಯಂಭುವಿನಂತೆ
ಪಾತಾಳದಾಳಕಿಳಿಯುವನು ಸಾವರ್ಣಿಗಳ
ತೆರದಿ, ಲೋಲಾಡಿರಲು ಭೋಗದೊಳು ದೇಹ-ಮನ.

o o o

ಇಹರೀಗ ದಂತಕತೆ ಸ್ವಾಯಂಭುವ-ವೈವಸ್ವತರು ;
ಅವರಡಿ ಸೋಂಕಿದ ನೀರು-ನೆಲ ತೀರ್ಥ-ಕ್ಷೇತ್ರಗಳು. —ರಶ್ಮಿ, 7-300

ವಿಶ್ವಾಮಿತ್ರನು ರಾಜ್ಯಪದವಿ ಗ್ರಹಣ ಮಾಡುವ ಕಾಲಕ್ಕೇ ಸ್ವಾಯಂಭುವ-ವೈವಸ್ವತ ಮನುಗಳು 'ದಂತಕತೆ'ಗಳಾಗಿದ್ದರು. ವಿಶ್ವಾಮಿತ್ರರನ್ನು ಕಾಡಿದ್ದ ಆರ್ಯ-ದ್ರಾವಿಡ ಸಮನ್ವಯದ ಸಮಸ್ಯೆ ಅವರೆದುರಿಗಿರಲಿಲ್ಲ. ಆರ್ಯಸಮಾಜ, ರಾಜ್ಯ ಸ್ವರೂಪ, ಅಂತರ್ದರ್ಶನಗಳ ಕಾರಣಪುರುಷರಾಗಿ- Archetypal - ಮೂಲಮಾದರಿ ವ್ಯಕ್ತಿಗಳಾಗಿ ಈ ಇಬ್ಬರು ಮನುಗಳು ಮೂಡಿನಿಂತಿದ್ದಾರೆ. ಆದಿಮಾನವ ಚಕ್ರವರ್ತಿ-ಆದಿಮಾನವ ದಂಪತಿಗಳಾಗಿ ಸ್ವಾಯಂಭುವ-ಶತರೂಪೆಯರು-ಭಾರತವರ್ಷದ-ಪಂಚ ಗೌರೀ ಕ್ಷೇತ್ರದಲ್ಲಿ ಏನನ್ನು ಸಾಧಿಸಿದನೆಂದು ನೋಡುವದು ಈ ಉಪನ್ಯಾಸದ ಒಂದು ಭಾಗ. ಇನ್ನೊಂದರಲ್ಲಿ-ಮನುಷ್ಯನ ಎಲ್ಲ ಸುಖದುಃಖಗಳಾಚೆಗೆ-ಆತನ ಸಮಸ್ತ ಜ್ಞಾನಪ್ರಭೆಗೂ ಮೂಲವಾಗಿ ಸಮಸ್ತ ವಿಶ್ವದ ಸೃಜನಕಾರಣವಾದ ಆನಂದ ವನ್ನು ಶೋಧಿಸಿದ ವೈವಸ್ವತ ಮನುವಿನ ಸಾಧನೆಯ ವಿಶ್ಲೇಷಣೆ ಉಪನ್ಯಾಸದ ಎರಡನೆಯ ವಸ್ತು.

ಪರಂಪರೆಯಿಂದ ಸ್ವಾಯಂಭುವ ಮನುವು ಈಶಾವಾಸ್ಯ ಉಪನಿಷನ್ಮಂತ್ರ ಗಳಿಗೆ ದ್ರಷ್ಟಾರನು. ಈ ಉಪನಿಷನ್ಮಂತ್ರಗಳಿಂದ ತನ್ನ ಮಗಳಾದ ಆಕೂತಿಯ ಮಗ ಯಜ್ಞನಾಮಕ ಪರಮಾತ್ಮನನ್ನು ಸ್ತುತಿಸಿದ್ದಾನೆ. ಭಾರತಸಿಂಧುರಶ್ಮಿಕಾವ್ಯ ದಲ್ಲಿಯೂ ಸ್ವಾಯಂಭುವನು ಯಜ್ಞಸಂಸ್ಥೆಯ ಮೂಲಪುರುಷನಾಗಿದ್ದಾನೆ. ಕಾಮ ಪ್ರೇಮಗಳನ್ನು ರಾತ್ರಿ ಹಗಲುಗಳು ಒಂದೇ ದಿನದ ಎರಡು ಅಂಗಗಳಾಗಿರುವಂತೆ ಪರಸ್ಪರ ಪೂರಕವೆಂದು ಸಾಕ್ಷಾತ್ಕರಿಸಿಕೊಂಡವನು. ಅಂತೆಯೇ ಕುಟುಂಬ ಸಂಸ್ಥೆ

ಯನ್ನೂ ರೂಪಿಸಿ, ಯಜ್ಞಸಂಸ್ಥೆಯ ಮೂಲಕ ವಿಶ್ವದ ಅಂತಶ್ಶಕ್ತಿಗಳ ಅರಿವು ಹಾಗೂ ಸಹಕಾರಗಳನ್ನು ಸಾಧಿಸಿ, ಗುಣಪ್ರಧಾನ ವರ್ಣಾಶ್ರಮದ ಮೂಲಕ ಸಮಾಜಕ್ಕೊಂದು ಕಟ್ಟುಪಾಡು ತರುತ್ತಾನೆ. ಈ ಎಲ್ಲ ಕಾರ್ಯಸಾಧನೆಯಲ್ಲಿ ಸಪ್ತರ್ಷಿಗಳ ಪೌರೋಹಿತ್ಯ ಸಲಹೆ ಸಹಕಾರಗಳ ಬೆಂಬಲವಿರುತ್ತದೆ. ಕೊನೆಗೆ ಈ ಆದಿಚಕ್ರವರ್ತಿ ತೀರಿಕೊಂಡಾಗ_ಅವನ ಶವಸಂಸ್ಕಾರ ಸಂಪ್ರದಾಯವೂ ರೂಢ ವಾಗುತ್ತದೆ,

ಈ ದೃಷ್ಟಿಯಿಂದ ಸ್ವಾಯಂಭುವಿನಲ್ಲಿ ಸೃಜನಶೀಲತೆ ಹಾಗೂ ಸಮಾಜ ಸಂಘಟಕ ಶಾಸ್ತ್ರಪ್ರಜ್ಞೆಯ ಪ್ರಥಮ ರೂಪಗಳನ್ನು ಕಾಣುತ್ತೇವೆ. 'ವೇದ' ಎಂಬ ಪದದಲ್ಲಿ ಬ್ರಹ್ಮವೆಂಬ ಅರ್ಥದ ಸೃಜನಶೀಲ ಪ್ರತಿಭೆ, ಧರ್ಮವೆಂಬ ಅರ್ಥದ ಸಂಘಟನಾಶೀಲ ಕ್ಷಾತ್ರಪ್ರಜ್ಞೆಯೂ ಅಡಕವಾಗಿವೆ.

'ಸ್ವಾಯಂಭುವಿನ' ಕಲ್ಪನೆಯಲ್ಲಿಯೇ ಸೃಷ್ಟಿಯ ಬಗೆಗಿದ್ದ ಪಾವಿತ್ರ್ಯಭಾವನೆ ಯಿದೆ. ಬ್ರಹ್ಮನ ಮಾನಸಪುತ್ರರಾಗಿ ಜನಿಸಿದ, ಜಿತೇಂದ್ರಿಯರಾದ ಸನಕಾದಿಗಳಿಂದ ಪ್ರಜಾಭ್ಯುದಯವಾಗುವದಿಲ್ಲ ; ಸ್ವಾಯಂಭುವನಿಂದಲೇ ಸೃಷ್ಟಿ ಪ್ರಾರಂಭ. ಕಾಮ ನಿರಾಕರಣೆಯಲ್ಲ, ಧರ್ಮವಿರುದ್ಧವಾದ ಕಾಮವು ಪುರುಷಾರ್ಥಸಾಧಕ ವೀರಜನಾಂಗ ಸೃಷ್ಟಿಯ-ದಿವ್ಯಜೀವನಾಭ್ಯುದಯದ ಮೂಲ ಬ್ರಹ್ಮಶಕ್ತಿಯಾಗಿದೆ. ಸ್ವಾಯಂ-ಭುವನು ಅಂಥದೊಂದು ಬ್ರಹ್ಮಬೀಜದ ಸಾಂಕೇತಿಕ ಮೂರ್ತಿಯಾಗಿದ್ದಾನೆ.

> "....ಪ್ರಜಾಭಿವೃದ್ಧಿಗೆ ಮೂಲ ಸಂತಾನದಭ್ಯುದಯ.
> ಬ್ರಹ್ಮ ಯೋಚನೆಯೊಳಹ ಮುಳುಗಿ ಧ್ಯಾನಸ್ಥರದಿ.
> ಆಗ ಬ್ರಹ್ಮಶರೀರಬಿಂಬದೊಳಗಿಂದದೋ !
> ಪ್ರತಿಬಿಂಬ ದೇಹದೊಲು ಡಿಂಭದೊಲು ಹೊರಬಂದು
> ಕಣ್ಗೆ ಬಿತ್ತೊಂದು ಮೈ, ಜೋಡಿ ಮೈ ಎಂಬವೊಲು
> ಉಭಯ ಲಿಂಗಿಯೊ ಏನೊ ! ಒಂದಿರುವದೆರಡಾಯ್ತು
> ಸ್ತ್ರೀಪುರುಷರೂಪಗಳ ಮಿಥುನ ಕಣ್ ಕೋರಯಿಸಿ !
> ಸ್ವಾಯಂಭು ಮನುವೆಂಬ ನಾಮದ ಸ್ಫುರಣವಾಯ್ತು.
> ಪುರುಷರೂಪಕೆ ಮಡದಿಯಾದಳಾ ಸ್ತ್ರೀರೂಪೆ.
> ಅಂತು ಶತರೂಪೆಯೆಂಬಭಿದಾನ. ಪ್ರಪ್ರಥಮ
> ದಂಪತಿಗಳಿವರು, ಮಾತಾಪಿತರು ಮನುಕುಲಕೆ...." —ರಶ್ಮಿ, I–14.

ಪ್ರಳಯ ಸೃಷ್ಟಿಗಳ ಸರಪಣಿ ಅನಂತ. ಹೀಗೆ ಇಂದಿನ ಸೃಷ್ಟಿಗೆ ಮೂಲ ಸನ್ನಿವೇಶವೂ ಆ ಸರಪಣಿಯಲ್ಲಿಯ ಒಂದು ಕೊಂಡಿ. ಆಗ ಅನಂತಶಯನನಾದ ಕಾಲಕಾಲೇಶ್ವರನು ಪ್ರಳಯ ಜಲಧಿಯಲ್ಲಿ ಸಮಾಧಿಸ್ಥನಾಗಿದ್ದಾಗ ಸೃಷ್ಟಿಗೆ ಕಾರಣ ವಾದ ಪರಾಶಕ್ತಿ ಸ್ಪಂದಿಸುತ್ತದೆ. ಆ ಪರಮಾತ್ಮನ ನಾಭಿಯಲ್ಲೊಂದು ಕಮಲ ಉದ್ಭವಿಸಿ, ಅದರಲ್ಲಿ ಪರಮಚೈತನ್ಯ ತುಂಬಿ 'ಸ್ವಯಂಭೂ' ನಾಮದ ನಾಲ್ಮೊಗ

ನಾದ ಬ್ರಹ್ಮನು ಉದಯಿಸುತ್ತಾನೆ. ನಾಲ್ದೆಸೆಗಳನ್ನೂ ನೋಡಬಲ್ಲ ಆ ನಾಲ್ಮೊಗನು ತನ್ನ ಹೃತ್‌ಕಮಲದಲ್ಲಿ ಪೀತಾಂಬರಧಾರಿಯನ್ನು ಕಂಡು ಪ್ರಾರ್ಥಿಸುತ್ತಾನೆ—

"ಪೂರ್ವಕಲ್ಪದೊಳಿದ್ದವೊಲು ಸೃಷ್ಟಿಸುವದೆಂದು
ನೋಂತಿಹೆನು. ಏಗೆಯ್ವೆನರುಹು, ಲೋಕೇಶ್ವರ" —ರಶ್ಮಿ, I-11

ಬ್ರಹ್ಮನ ಈ ನೋಂಪಿಗೆ ಪರಮಾತ್ಮನ ಅನುಗ್ರಹವಾದರೂ ಸ್ವಾಯಂಭುವನ ಉದಯದವರೆಗೆ "ಗೆಲ್ಲಲಿಲ್ಲವು ನೋಂಪಿ."

ಇಲ್ಲಿ ಬ್ರಹ್ಮನ ಸೃಜನಕ್ರಿಯೆಯೊಂದು "ನೋಂಪಿ"–ಪವಿತ್ರ ವ್ರತವಾಗಿದೆ. ಉಪನಿಷತ್ತುಗಳಲ್ಲಿ ಇದು ಜ್ಞಾನಾನಂದಪೂರ್ಣ ಆಲೋಚನಾರೂಪಿ ತಪಸ್ಸಾಗಿದೆ. ಬ್ರಹ್ಮನ ತಪಸ್ಸು ಪವಿತ್ರ ಜ್ಞಾನಾನಂದರೂಪಿ ಆಲೋಚನೆಯಾಗಿರುವಂತೆಯೇ ಆ ಬ್ರಹ್ಮನಿಂದ ಉದಯಿಸಿದ ಸ್ವಾಯಂಭುವ–ಶತರೂಪೆಯರ ದಾಂಪತ್ಯಜೀವನವೂ ಪವಿತ್ರ. ಮನುಕುಲದ ಮಾತಾಪಿತೃಗಳಾದ ಈ ದಂಪತಿಗಳು ವ್ಯಕ್ತಿಗಳಾಗಿದ್ದರೂ ವಿಶ್ವಕುಟುಂಬ ನಿರ್ಮಾತೃಗಳಾಗಿದ್ದಾರೆ.

ಒಂದಾಗಿದ್ದ ಬ್ರಹ್ಮನ ದೇಹವೇ ಸೃಷ್ಟಿಸಂಕಲ್ಪದಿಂದ ಎರಡಾಗಿ ಸ್ವಾಯಂಭುವ-ಶತರೂಪಾ-ಎಂಬ ಮೂಲದಂಪತಿಗಳಾಗಿ ಒಡೆದು ಪ್ರೇಮದಿಂದ ಪುನಃ ಒಂದಾಗಿ ಸಂತಾನದ ಮೂಲಕ ತನ್ನ ಮೂಲದ ಒಂದು ಅನಂತತೆಯನ್ನು ಸಾಧಿಸುತ್ತದೆ. ಹೀಗೆ ಈ ಬ್ರಹ್ಮಸೃಷ್ಟಿಯಲ್ಲಿ ಏಕತೆ ಹಾಗೂ ಪ್ರೇಮಗಳು ಹಾಸುಹೊಕ್ಕುಗಳಾಗಿದ್ದು ಮಾನವವ್ಯಕ್ತಿ ಹಾಗೂ ಮಾನವಸಮಾಜಗಳೂ ಇವೆರಡು ತತ್ವಗಳನ್ನೇ ಸಾಕ್ಷಾತ್ಕರಿಸಿಕೊಳ್ಳಬೇಕಾಗಿದೆ. ಆದರೆ ಸ್ವಾಯಂಭುವ ಶತರೂಪೆಯರಲ್ಲಿ ಬೀಜರೂಪವಾಗಿ ಮೂಡಿದ ಈ ಪ್ರೇಮ ಹಾಗೂ ಐಕ್ಯಾನುಭೂತಿಗಳನ್ನು ಮಾನವಸಮಾಜವಿನ್ನೂ ಸಮಗ್ರವಾಗಿ-ಶಾಶ್ವತವಾಗಿ ಸಾಧಿಸಬೇಕಾಗಿದೆ.*

---

* ಶ್ರೀ ಅರವಿಂದರು ಸಾವಿತ್ರಿ ಮಹಾಕಾವ್ಯದ ಭರತವಾಕ್ಯವನ್ನಾಗಿ ಸಾವಿತ್ರಿಯಿಂದ ಹೇಳಿಸುವ ನುಡಿಗಳ ತಿರುಳೂ ಇದೇ—

Awakened to the meaning of my heart
That to feel love and oneness is to live
And this the magic of our golden change
Is all the truth I know or seek, O sage.

*—Savitri-813.*

[ಪ್ರೇಮಭಾವನೆ ಹಾಗೂ ಐಕ್ಯಾನುಭೂತಿಯೇ ಬದುಕು–
ಈ ಹೃದಯದರ್ಥವೆ ನಮ್ಮೊಳೆಚ್ಚರವಾಯ್ತು.
ಇದು ನಮ್ಮ ಸುವರ್ಣಪರಿವರ್ತನೆಯ ಇಂದ್ರಜಾಲ
ಓ ಋಷಿವರ್ಯ, ಈ ಸತ್ಯ ನಾನರಿತಿರುವೆ, ಅಥವಾ ಶೋಧಿಸುತ್ತಿರುವೆ.
—ಸಾವಿತ್ರಿ-813]

'ರಶ್ಮಿ' ಕಾವ್ಯದ ಸ್ವಾಯಂಭುವ-ಶತರೂಪೆಯರು ತಮ್ಮ ಸುತ್ತಲಿನ ಪ್ರಪಂಚದೆಡೆಗೆ "ಸೂತ್ರದ ಬೊಂಬೆಗಳಂತೆ ಕಣ್ಬಿಡುವ ಗಾವಿಲ"ರಂತಲ್ಲ. ಉಷೆ ತಂದ ಅರುಣೋದಯದ ಚೆಲುವಿನಿಂದ ಪ್ರಾರಂಭಿಸಿ ಅಸಂಭಾವ್ಯವೆನ್ನಿಸುವಂಥ ವಿಶ್ವದ ದೃಶ್ಯಕಾವ್ಯಗಳಿಗೆ ಅವರ ಹೃದಯಗಳು ಮಿಡಿಯುತ್ತವೆ; ಬುದ್ಧಿಗಳು ಅರ್ಥೈಸುತ್ತವೆ. ಈ ದಂಪತಿಗಳ ಬಗೆಗೆ ಓದಲು ಪ್ರಾರಂಭಿಸಿದೊಡನೆ ಇವರು ಆದಮ್ ಈವರಂತೆ (Adam & Eve) ಎಂಬ ಹೋಲಿಕೆಯ ಭ್ರಾಂತಿ ಬರುವ ಸಂಭವವಿದೆ. ಆದರೆ ಈ ದಂಪತಿಗಳು ಸಮಸ್ತ ಸಂಸ್ಕೃತಿ ಹಾಗೂ ನಾಗರಿಕತೆಗಳಿಗೆ ಬೀಜಭೂತರು. ಸ್ವಾಯಂಭುವನೆದುರು ಚಕ್ರವರ್ತಿ ಪದಸಂಪದವು ಹಾಸಿತ್ತು. ಆರ್ಷ ತೇಜಸ್ಸು ಹೃದಯ ಬುದ್ಧಿಗಳಲ್ಲಿ ತೂಗಿತ್ತು. ಮೋಕ್ಷಪದವು ನಿಂತಲ್ಲಿ ಬಂದಲಂಕರಿಸಿತ್ತು. ಪಂಚಗೌರೀಗಿರಿಯಡಿಯ ರಸಾನದಿಯ ತೀರಕ್ಕೆ ಬಂದಿಳಿದ ಸ್ವಾಯಂಭುವನಲ್ಲಿ ವಿಶ್ವದ ಆದಿ ಚಕ್ರವರ್ತಿಯ ಸುಭಗಾಕೃತಿಯನ್ನು 'ರಶ್ಮಿ' ಕವಿ ಕಂಡರಿಸಿದ್ದಾರೆ.

> "ಸ್ವಾಯಂಭುವಹುದು ಎತ್ತರದಾಳು, ಚೆನ್ನಿಗನು.
> ಅವನ ಸುಭಗಾಕಾರ, ದುಂಡುಸುತ್ತಿದ ಮೊಗವು
> ನಿಡಿದೋಳು, ನಿಡಿದಾದ ಮೂಗು, ಹೊಳೆಯುವ ಕಣ್ಣು,
> ಬಿತ್ತರವಡೆದಿಹ ಹಣೆ, ದೃಷ್ಟಿ ಕೂರ್ಗಣೆಗೆಣೆ!
> ಅಂಗಾಂಗದಲಿ ರಾಜಕಳೆ ತುಂಬಿ ಸೂಸಿತ್ತು." —ರಶ್ಮಿ, I–14.

ಇಂಥ ಸುಭಗಾಕಾರ ಸ್ವಾಯಂಭುವನ ಭುಜದೆತ್ತರದಾಳಾಗಿ, ಆತನ ಹಾಲ್ಗನಸುಗಳಿಗೆ ಧ್ರುವತಾರೆಯಾದ ನೀರೆಯಾಗಿ ಶತರೂಪೆ ಸಹಧರ್ಮಿಣಿಯಾಗಿದ್ದಾಳೆ. ಪ್ರಕೃತಿಯಲ್ಲಿ ಕಂಗೊಳಿಸುವ ಸಮಸ್ತ ಸೌಂದರ್ಯದ ಹಿಂದಿನ ಪರಾಪ್ರಕೃತಿಯೆ ಶತರೂಪೆಯ ವ್ಯಕ್ತಿತ್ವಕ್ಕೆ ಜೀವಕಳೆ ತುಂಬಿರುವಳೆಂದು ಸ್ವಾಯಂಭುವಿನ ಕವಿದೃಷ್ಟಿಗೆ ಕಂಡಿದೆ, ಇದಕ್ಕೆ ತಿರುವುಮುರುವಾಗಿ ಶತರೂಪೆಗೆ ಪರಮಪುರುಷನೇ ತನ್ನ ಪುತ್ತಳಿಗೇ ಜೀವಕಳೆ ತುಂಬಿ ರೂಪಿಸಿದಂತೆ ಸ್ವಾಯಂಭುವ ಕಾಣುತ್ತಾನೆ. ಪ್ರಪಂಚದ ಈ ಪ್ರಥಮ ಪ್ರಣಯಿಗಳಿಗೆ ಪ್ರಥಮ ಸಂತಾನವಾಗಿ ಬಂದ 'ಪ್ರಿಯವ್ರತ'ನಿಂದ ಪ್ರಥಮ ಮನ್ವಂತರ ಮುಂದುವರಿಯುತ್ತದೆ. ಆದರೆ ಈ ದಂಪತಿಗಳ ಮಂಗಲವಿವಾಹವು ಕೇವಲ ಸಂತಾನವೃದ್ಧಿ ಕಾರಣದಿಂದ ಮಹತ್ವ ಪಡೆದಿಲ್ಲ. ಅದಕ್ಕೊಂದು ವಿಶೇಷ ವಿಶ್ವಮಹತ್ವ ಉಂಟು. ಈ ಅಪೂರ್ವ ವಿವಾಹ ಸಂದರ್ಭದಲ್ಲಿ ಯಕ್ಷ, ಗಂಧರ್ವ, ಕಿಂಪುರುಷ-ಕಿನ್ನರರು ಹೇಳಿದ ಸ್ವಸ್ತಿವಚನದಲ್ಲಿ ಈ ವೈಶಿಷ್ಟ್ಯದ ದರ್ಶನವಿದೆ—

> "............ಸ್ವರ್ ಲೋಕದಂತಿದು ನಿಂತ ನೀರಲ್ಲ!
> ವಿಕಸನದ ದಾರಿಯನು ತುಳಿವ ಮಾನವ ಬಂದ!
> ಅವನಿಗಿದೆ ಸುಖ ಮಿಗಿಲು, ದುಃಖವದಕೂ ಮಿಗಿಲು!
> ಸಾವು ನೋವಿನ ಬೆಲೆ ಅದರಾಚೆಗಿನ ನೆಲೆ!

ಅನ್ನಮಯದಿಂದೆದ್ದು ಆನಂದದವರೆಗೆ
ಹಬ್ಬಿಹುದು ಮಾನವನ ಕರುಳುಬಳ್ಳಿಯು ಬೆಳೆಯು !
ಓಂ ಸ್ವಸ್ತಿ !............ —'ರಶ್ಮಿ' : I–18.

ಮಾನವನ ವಿಕಾಸಶೀಲ ವ್ಯಕ್ತಿತ್ವದಲ್ಲಿ ದಿವ್ಯಪ್ರಾಣವೇ ಸ್ವಯಂಪ್ರಜ್ಞಾಶೀಲವಾಗಿ ಅರಳುತ್ತದೆ. ಆದ್ದರಿಂದಲೆ ಸ್ವಾಯಂಭುವ ಹಾಗೂ ಶತರೂಪೆಯರ ದಾಂಪತ್ಯವು ಅವರ ಜೀವಜಲದಲ್ಲಿ, ಶುದ್ಧ ಪ್ರಾಣಮಯ ಚೇತನದಲ್ಲಿ ಪ್ರಜ್ಞಾರಶ್ಮಿಯನ್ನು ಪ್ರತಿಬಿಂಬಿಸುತ್ತಿತ್ತು. ಈ ಕಾರ್ಯದಲ್ಲಿ ಸಹಕಾರಿಗಳಾದವರು ಋಷಿಗಳು. ಸ್ವಾಯಂಭುವನ ಪೂರ್ವದಲ್ಲಿಯೇ ಬ್ರಹ್ಮನ ನಾಭಿ, ಊರು, ಅಂಗುಷ್ಠಾದಿಗಳಿಂದ ಜನ್ಮಿಸಿದ ಸಪ್ತರ್ಷಿಗಳು ಸ್ವಾಯಂಭುವ-ಶತರೂಪೆಯರ ಜೀವನಸಿಂಧುವಿನಲ್ಲಿ ಬೆಳಗುವ ದಿವ್ಯರಶ್ಮಿಗಳಾಗಿ ನಿಲ್ಲುತ್ತಾರೆ. ಇದು ಇನ್ನೊಂದರ್ಥದಲ್ಲಿ ಬ್ರಾಹ್ಮ-ಕ್ಷಾತ್ರ ಸಂಗಮವಾಗಿದೆ. ಬ್ರಾಹ್ಮವು ಜೀವನದ ಅಂತರ್ದರ್ಶನ, ತ್ರಿಕಾಲ ದರ್ಶನ ಹಾಗೂ ಜೀವನಧರ್ಮ ನಿಯಮಗಳ ದರ್ಶನ ಪಡೆದರೆ ಕ್ಷಾತ್ರವು ಸಂಕಲ್ಪಬಲದಿಂದ, ಅದಮ್ಯ ಚೈತನ್ಯದ ಧೈರ್ಯೋತ್ಸಾಹ ಸಾಹಸಗಳಿಂದ ರಾಷ್ಟ್ರ ನಿರ್ಮಿಸಿ–ವಿಸ್ತರಿಸಿ ಚಕ್ರವರ್ತಿತ್ವದ ಸಿದ್ಧಿ ಪಡೆಯುತ್ತದೆ. ಈ ದೃಷ್ಟಿಯಿಂದ ಸ್ವಾಯಂಭುವ ಮನುವಿನಾಳ್ಕೆಯಲ್ಲಿ ಸಪ್ತರ್ಷಿಗಳು ನಿರ್ವಹಿಸಿದ ಪಾತ್ರವನ್ನು ಗಮನಿಸಿದರೆ ಸ್ವಾಯಂಭುವನ ಸಾಧನೆಯ ವಿಶೇಷ ಸ್ವರೂಪವೂ ಗೋಚರವಾಗುತ್ತದೆ.

"ಕಮಲೋದ್ಭವದನ ದೇಹ-ಮನದಿಂದ ಹುಟ್ಟಿದರು
ಸಪ್ತರ್ಷಿ, ನಾಭಿಯಿಂದತ್ರಿ ಐತಂದಿಹನು ;
ನಾರದ ಊರು ; ಅಂಗುಷ್ಠದಿಂದ ದಕ್ಷಬ್ರಹ್ಮ ;
ಭೃಗು ಪ್ರಾಣಗಳಿಂದ ; ಪುಲಹ ನೇತ್ರಗಳಿಂದ ;
ಮುಖದಿಂದ ಅಂಗಿರಸ ; ಮನದಿಂದ ಕಶ್ಯಪನು ;
ನೆಳಲಿನಿಂದುದಿಸಿದರು ಕರ್ದಮ ಪ್ರಜಾಪತಿಯು
ಮತ್ತೆ ಹಿಂದೊಗೆತಂದ ಪ್ರಜಾಪತಿ ಒಂಬತ್ತು."

—'ರಶ್ಮಿ', 13

ಈ ಕಾವ್ಯದಲ್ಲಿ ಸಪ್ತರ್ಷಿಗಳ ಪ್ರಥಮ ಕಾರ್ಯವೆಂದರೆ ಸ್ವಾಯಂಭುವ ಮನುವಿನ ಜೀವನಕ್ರಮಕ್ಕೆ ಒಂದು ತಾತ್ತ್ವಿಕ ನೆಲೆಗಟ್ಟನ್ನು ಒದಗಿಸಿ ಸುವ್ಯವಸ್ಥಿತಗೊಳಿಸುಹುದು. ಆದ್ದರಿಂದ ಸ್ವಾಯಂಭುವ ಮನುವಿನ ಜೀವನದ ಮಹತ್ವದ ಪ್ರಸಂಗಗಳಲ್ಲೆಲ್ಲ ಅವರಲ್ಲಿ ಎಲ್ಲರೂ ಆಗಲಿ, ಅಂಗಿರಸ ನಾರದಾದಿ ಬೇರೆ ಬೇರೆಯಾಗಲಿ ಪಾತ್ರಧಾರಿಗಳಾಗುವದನ್ನು ಕಾಣುತ್ತೇವೆ.

ಸ್ವಾಯಂಭುವನ ಪ್ರಥಮ ಪುತ್ರ–ದಾಂಪತ್ಯಜೀವನದಿಂದುದಯಿಸಿದ ಪ್ರಥಮ ಮಾನವ ಚಕ್ರವರ್ತಿಗೆ "ಪ್ರಿಯವ್ರತ"ನೆಂದು ನಾಮಕರಣ ಮಾಡಿ ಶುಭಜೀವನದ ಮಂತ್ರಪಠನ ಮಾಡುವುದರಿಂದ-ಸ್ವಾಯಂಭುವನ ಅಗ್ನಿಸಂಸ್ಕಾರದವರೆಗೆ ಸಪ್ತರ್ಷಿ

ಗಳು ವಿವಿಧ ಸಂಸ್ಕಾರಗಳನ್ನು ನಿಶ್ಚಿತಗೊಳಿಸುತ್ತಾರೆ. ಆರ್ಯಜೀವನದ ಸುಸಂಸ್ಕೃತ ಬಾಳಿಗೆ ತಳಪಾಯ ಹಾಕುತ್ತಾರೆ.

ಮಗು ಪ್ರಿಯವ್ರತನ ವಿದ್ಯಾಭ್ಯಾಸಕ್ಕೆ ಹೊಣೆ ಹೊತ್ತವರು ಆಂಗಿರಸರು. ಆದರೆ ಈ ವಿದ್ಯಾಭ್ಯಾಸದ ಹಿನ್ನೆಲೆಯಾಗಿ ಸ್ವಾಯಂಭುವ ಮನು ಆಡುವ ಮಾತು ಅರ್ಥಪೂರ್ಣ :

"....ಗೆರೆಯೆಳೆವೆನುಪಟಳಕೆ
ಕಟ್ಟುನಿಟ್ಟಿರದ ಚಿಕ್ಕಂದಿಗಿನ್ನಿಲ್ಲಂದ." —ರಶ್ಮಿ, I-25.

ಮಗುವಿನ ಅಂದಚೆಂದಗಳನ್ನು ಆಟಪಾಟಗಳನ್ನು 'ಉಪಟಳ'ವನ್ನು ಮೆಚ್ಚಿ ಆನಂದಿಸಿದ ತಂದೆ–ಈ ಚಿಕ್ಕಂದಿನ ಚಂದದ 'ಉಪಟಳ'ಕ್ಕೂ ಒಂದು 'ಕಟ್ಟುನಿಟ್ಟು' ಬೇಕು–ಎಂದುಕೊಳ್ಳುತ್ತಾನೆ. ಹೀಗೆ ವಿದ್ಯಾಭ್ಯಾಸದ ಮೂಲ, ಜೀವನದ ಅಂದಚಂದಗಳು ಕಟ್ಟುನಿಟ್ಟಿನಲ್ಲಿ ವಿಕಸನಗೊಳ್ಳಲೆಂಬ ಹಂಬಲದಲ್ಲಿವೆ.

"....ದೇಹಕಾಯಾಮ ಸಂದಿರುವಂತೆ
ಸಲಲಿ ಬುದ್ಧಿಗೆ................" —ರಶ್ಮಿ, I-25

ಎಂಬ ಅಭಿಲಾಷೆಯಲ್ಲಿ ವ್ಯಕ್ತಿತ್ವದ ಸಮಗ್ರ ಪುಷ್ಟಿಯ ಕಲ್ಪನೆ ಅಡಗಿದೆ.

ಆಂಗಿರಸ ಋಷಿಗಳು ಈ ಹೊಣೆಗಾರಿಕೆಯನ್ನೊಪ್ಪಿಕೊಂಡು ಸ್ವಾಯಂಭುವ ಮನು ದಂಪತಿ ಹಾಗೂ ಮಗುವಿನೊಂದಿಗೆ 'ಗುಹಾ'ವಾಸಿಗಳಾಗುತ್ತಾರೆ, ಮುಂದೆ ಉಳಿದ ಋಷಿಗಳೂ ಅವರೊಡನೆ ಬಂದು ಸೇರುತ್ತಾರೆ.

ಹೀಗೆ ಮನುವಿನ ಚೈತನ್ಯಮಯ ಬಾಳಿಗೆ ದರ್ಶನ ಸಂಸ್ಕಾರ ಒದಗಿಸುವವರಾಗಿ ಸಪ್ತರ್ಷಿಗಳು 'ರಶ್ಮಿ'ಯಲ್ಲಿ ಮೊದಲು ಕಾಣಿಸಿಕೊಳ್ಳುತ್ತಾರೆ.

ಪ್ರಿಯವ್ರತನ ಸಹಜ ಕುತೂಹಲದ ಆಟದಲ್ಲಿ ಬೆಣಚುಗಲ್ಲಿನಿಂದ ಅಗ್ನಿ ಹುಟ್ಟಿದ್ದು – ಆಂಗಿರಸರಿಗೆ ಅಣುರೇಣು ತೃಣಕಾಷ್ಠದಲ್ಲಡಗಿದ ವೈಶ್ವಾನರ ಅಗ್ನಿ ದರ್ಶನವಾಗಿ ಹೊಳೆದು ಆರ್ಯರ ಯಜ್ಞಸಂಸ್ಥೆಯ ಉದಯಕ್ಕೆ ಕಾರಣವಾಗುತ್ತದೆ. ಇಂಥ ಒಂದು ಕಲ್ಪನೆಗೆ ವೇದದ ಒಂದು ಮಂತ್ರವನ್ನು ಕವಿಗಳು ಆಧಾರವಾಗಿ ಉದಾಹರಿಸಿದ್ದಾರೆ—

"ತಂ ನೇಮಿಮೃಭವೋ ಯಥಾಽಽನಮಸ್ವಸಹೂತಿಭಿಃ ।
ನೇದಿಯೋ ಯಜ್ಞಮಂಗಿರಃ............"

[ಓ ಅಂಗಿರಸರೆ! ಆಹ್ವಾನಯುತ ಶಬ್ದಗಳಿಂದ ಆ ಯಜ್ಞವನ್ನು ಕೆಳಗೆ ಸಮೀಪಕ್ಕೆ ತನ್ನಿರಿ–ಋಭುಗಳು ಚಕ್ರದ ನೇಮಿಯನ್ನು ತಂದಂತೆ!]

VII-175-5

ಮನುಷ್ಯಜೀವನವು ವಿಶ್ವನಿಯಮಕ್ಕನುಗುಣವಾಗಿ, ವಿಶ್ವಧರ್ಮದಾಕೃತಿಗೆ ಸಮ ಶ್ರುತಿಯಾಗಿ ರೂಪುಗೊಳ್ಳುವಂತೆ ಜನಕ್ಕೆ ಜ್ಯೋತಿಪ್ರದಾನ ಮಾಡುವದು ಈ ಯಜ್ಞ. ಇದರ ಸಾಂಕೇತಿಕ ಅಂತರಾರ್ಥನಿರೂಪಣೆ ಇಡೀ ಕಾವ್ಯದ ಅಂತಸ್ಸಾರ ವಾಗಿ ಬಂದಿದೆ. ಅಂತರ್ಯಜ್ಞವೆಂದರೇನೆಂದು ಉತ್ಸರ್ಪಿಣಕಾಂಡದ ಎರಡನೆಯ ಅಧ್ಯಾಯದಲ್ಲಿ ವಿವರವಾಗಿ ನಿರೂಪಿಸಲಾಗಿದೆ.

ಪ್ರಸ್ತುತ ಕಾವ್ಯಭಾಗದಲ್ಲಿ (ಪು. 30-31) ನಾರದರು ಸೋಮರಸದ ಸಾಂಕೇತಿಕತೆಯನ್ನು ಒಂದು ಸಹಜ ಘಟನೆಯ ಹಿನ್ನೆಲೆಯಲ್ಲಿ ಒದಗಿಸುತ್ತಾರೆ.

ಪಂಚಗೌರೀಸೀಮೆಯಲ್ಲಿ-ಮೂಜವತ್ ಪರ್ವತದ ತುಂಬೆಲ್ಲ ಬೆಳೆದ ಸೋಮ ವನಸ್ಪತಿಯ ಚಿಗುರನ್ನು ಸವಿದ ನಾರದರು ಅದರ ಸ್ವಾದಕ್ಕೆ-ಕ್ಷೀರಸಹಿತವಾಗಿ ಸೋಮರಸ ಸವಿದಾಗ ಅದರ ರುಚಿಗೆ ಮೈಮರೆಯುತ್ತಾರೆ, ಆ ಮೈಮರೆತದಲ್ಲಿ– ಸಮಾಧಿಸ್ಥಿತಿಯಲ್ಲಿ - ಇಂದ್ರಿಯ ಆನಂದದ ಮೂಲವೆ–ಸೃಷ್ಟಿಕಾರಣ ನಿಜಾನಂದ ರಹಸ್ಯವೆ ಹೊಳೆಯುತ್ತದೆ. ಅಂದರೆ ಬದುಕಿಗೆ ಆನಂದವೆ ಮೂಲ—ಬದುಕಿನಲ್ಲಿ ಆನಂದಸಾರವೆ ಗುಪ್ತವಾಗಿ ಪ್ರವಹಿಸುತ್ತದೆ. ಆ ಗುಪ್ತ ಆನಂದಸಾರ ಹೀರುವದರ ಸಂಕೇತವೆ ಸೋಮಪಾನ.

> "ಅಗ್ನಿಹೋಮದಲಿ ಸೋಮದ ಹವನ ಮಿಗಿಲಹುದು
> ಆನಂದದಲ್ಲುದಿಸುತಾನಂದದಲಿ ಲೀನ
> ವಿಶ್ವವಿದು. ಸೋಮಪಾನಂದದಧಿ ಸಂಕೇತ." —'ರಶ್ಮಿ', I–3

ವೇದರ್ಷಿಗಳು ಸೃಷ್ಟಿಪ್ರಿಯರು ; ಜೀವನವನ್ನು ಸಂತೋಷದಿಂದ ಸ್ವೀಕರಿಸಿ ಹೋರಾಡುವಲ್ಲಿ ಹೋರಾಟಕ್ಕೆ ಮಂತ್ರಾಸ್ತ್ರ ಶಸ್ತ್ರಾಸ್ತ್ರ ವಿದ್ಯೆ ಪಡೆದು ಹೋರಾಡಿ ದವರು ; ಜೀವನದ ಸಮಸ್ತ ವೃತ್ತಿಗಳ ಅವಿಭಾಜ್ಯ ಅಂಗವಾಗಿದ್ದವರು.

ಸೃಷ್ಟಿ ಅವರ ಪಾಲಿಗೆ ಪರಮಾತ್ಮನ "ಏಕೋಹಂ ಬಹುಸ್ಯಾಮ" ಎಂಬ ಸಂಕಲ್ಪದ ದಿವ್ಯಾಭಿವ್ಯಕ್ತಿ. ಆದ್ದರಿಂದ ದಾಂಪತ್ಯ ಜೀವನ, ಸಂತಾನ ಪ್ರಾಪ್ತಿಗಳೂ ಯಜ್ಞಸ್ವರೂಪಗಳೇ ಆಗಿದ್ದವು.

'ಕಾಮವಾಸನೆ ಪ್ರೇಮ ಉಪಾಸನೆಯಹುದು" ಎಂಬ ತಿಳಿವಳಿಕೆ ಸ್ವಾಯಂಭುವ ಮನುವಿನ ಕುಟುಂಬ ಜೀವನದ ಮೂಲಸೂತ್ರವಾಗುವಂತೆ ಮಾಡಲು ಋಷಿಗಳು ಕಾರಣರಾಗುತ್ತಾರೆ. ಅಂತೆಯೇ ಕರ್ದಮ ಪ್ರಜಾಪತಿಯ ಹೆಣ್ಣುಮಕ್ಕಳನ್ನು ಈ ಋಷಿಗಳು (ನಾರದರನ್ನು ಉಳಿದು) ಮಂಗಲ ವಿವಾಹದಲ್ಲಿ ಕೈಹಿಡಿಯುತ್ತಾರೆ.* ದಕ್ಷ ಪ್ರಜಾಪತಿಯು ಸ್ವಾಯಂಭುವಿನ ಕನ್ಯೆ ಪ್ರಸೂತಿಯನ್ನೇ ಮದುವೆಯಾಗಿದ್ದ.

---

* ಅನು + ಗ್ರಹಣದಲ್ಲಿಯೂ ಇದೇ ಅರ್ಥ ಧ್ವನಿತವಾಗಿದೆ. —ಲೇ.

ಕರ್ದಮ ಪ್ರಜಾಪತಿಯ ಮಗಳು ಅನಸೂಯೆಯನ್ನು ಅತ್ರಿಯೂ, ಅಂಗಿರಸನು ಶ್ರದ್ಧೆಯನ್ನೂ ಭೃಗು ಖ್ಯಾತಿಯನ್ನೂ ಪುಲಹನು ಗತಿಯನ್ನೂ ಮದುವೆಯಾಗುತ್ತಾರೆ.

ಧರ್ಮ ಅರ್ಥ ಕಾಮಗಳಲ್ಲಿ ಒಬ್ಬರೊಬ್ಬರ ಕೈಹಿಡಿದು ಮೋಕ್ಷಮಾರ್ಗದಲ್ಲಿ ಮುನ್ನಡೆಯುವ ಸಂಕಲ್ಪಸಾಧನೆಯಾಗಿ ವಿವಾಹ ಸಂಸ್ಕಾರ ಏರ್ಪಡುವದು ಈ ಋಷಿಗಳ ಮಂತ್ರದರ್ಶನದಿಂದ. ಹೀಗೆ ಮಂತ್ರಗಳು 'ಧರ್ಮಜೀವನದ ಮೂಲಸೂತ್ರ'ಗಳನ್ನು ನೀಡುತ್ತವೆ; ಅನಂತಜೀವನ ನಡೆಸುವ ಪೌರುಷದ (ಸ್ತ್ರೀಪುರುಷರಿಬ್ಬರ) ಬ್ರಹ್ಮದರ್ಶನದ ಸಾಧನೆಯನ್ನೂ ನೀಡುತ್ತವೆ (ಪುರುಷನೆಂದರೆ ದೇಹವೆಂಬ ಪುರದಲ್ಲಿರುವ ಬ್ರಹ್ಮ—ಸ್ತ್ರೀ ಪುರುಷ ಎರಡೂ ರೂಪ ಅಹುದು).

ಮುಂದಿನ ಆರ್ಯಜೀವನದ ಸಮಗ್ರ ತಳಹದಿ ಸ್ವಾಯಂಭುವ ಮನುವಿನಾಳಿಕೆಯಲ್ಲಿ ಸ್ಥೂಲವಾಗಿ ರೂಪಗೊಂಡಿತೆಂದು 'ರಶ್ಮಿ' ಚಿತ್ರಿಸುತ್ತದೆ. ಈ ಚಿತ್ರಣದಲ್ಲಿ ಚಾತುರ್ವರ್ಣ್ಯದ ಮೂಲರೂಪವೂ ಒಂದು.

ಸ್ವಾಯಂಭುವ ಮನುವಿನ ಪ್ರಾರಂಭದ ಕಾಲದಲ್ಲಿ ಜನತೆ ಸುಖವಾಗಿ ದಾಂಪತ್ಯ ಜೀವನ ನಡೆಸುತ್ತ, ಹಣ್ಣು-ಹಂಪಲು ತಿಂದು, ಯಜ್ಞಯಾಗಾದಿಗಳಲ್ಲಿ ಸೋಮರಸ ಪಾನಮಾಡುತ್ತ, ಸೋಮಾರಿಗಳಾಗಲು ಪ್ರಾರಂಭಿಸಿದಾಗ ಸೋಮಾರಿ ಜೀವನವೇ ಒಂದು ವೇದಾಂತವಾಗಿ ಬೆಳೆಯಲು ಬಹುಕಾಲ ಹಿಡಿಯುವದಿಲ್ಲ.

"ಮೈಮುರಿದು ಮುಂದಾದವರಾರು ?
ಹುಟ್ಟಿರುವದು ಬವಣೆಬಡುವದಕ್ಕೇನು ?
ಸಪ್ತರ್ಷಿಗಳ ವೇದಾಂತ ನಮಗೇಕೆ ?"

—ಎಂದೆಲ್ಲಾ ವಿಚಾರಿಸಿ ಸೋಮಾರಿತನವನ್ನೇ ಆಹ್ವಾನಿಸಿಕೊಂಡಾಗ ಅಂಥ ಪ್ರಜಾಕೋಟಿಯ ಜೀವನದ ಕಳೆಯೇ ಮಾಯವಾಗುತ್ತದೆ; ಸ್ವಯಂಭುವನಿಗೆ ಗಾಬರಿಯಾಗುತ್ತದೆ.

"ಯಾವುದರ ನಿರ್ಮಾಣಕಾಗಿ ತಾ ಪ್ರಾರ್ಥಿಸಿದ
ಹೋಮಿಸುತ, ಆ ನಾಡು ನಿತ್ಯ ನವೆವುದ ಕಂಡು
ಉಸಿರು ಕಟ್ಟಿದೊಲಾಯ್ತು ಸ್ವಾಯಂಭು ಮನುವಿಂಗೆ" —ರಶ್ಮಿ, I-37.

ರಾಜ್ಯದಲ್ಲಿ ಪ್ರತಿಯೊರ್ವನ ಪ್ರತಿಭೆ ಹರಿಯುವ ದಿಶೆಯಲ್ಲಿ ಉದ್ಯೋಗವನ್ನೊದಗಿಸಿ ರಾಷ್ಟ್ರಾಭ್ಯುದಯ ಸಾಧಿಸಬೇಕೆಂದು ಸಂತತ ಪ್ರಗತಿಶೀಲ ಜನಾಂಗ ನಿರ್ಮಿಸಬೇಕೆಂದು ಸಪ್ತರ್ಷಿಗಳ ಸಮ್ಮೇಳನದಲ್ಲಿ ನಿರ್ಣಯಿಸುತ್ತಾನೆ. ಈ ಸಮ್ಮೇಳನದ ಪ್ರಥಮ ಶ್ರುತಿ – ಜನಗಣನೆ – ಜನಗಣತಿಯಲ್ಲ. ಸಪ್ತರ್ಷಿಗಳು ನಡೆಯಿಸಿದ ಈ ಜನಗಣನೆಯ ತಿರುಳು—

"........ತೂಗಿ ನೋಡಿದರವರ
ಒಲವು ನಿಲವುಗಳನ್ನು, ಗುಣ-ಪ್ರತಿಭೆಗಳನ್ನು.
ಅವರವರ ಪ್ರವೃತ್ತಿ-ನಿವೃತ್ತಿ ದಿಶೆಯರಿತು
ಸೂಕ್ಷ್ಮಾಂತಃಕರಣವನು ತಿಳಿದು ಸಪ್ತರ್ಷಿ
ನಿಯಮಿಸಿದರಾ ರಾಜ್ಯದೊಳಗಿರುವ ಪ್ರತಿಯೊರ್ವ
ವ್ಯಕ್ತಿಗನುರೂಪವಿಪ ಕ್ಷೇತ್ರವನು. ಇಹರಂದು
ಸಮಾವಿಷ್ಟ ಜಾನಪದರೆಲ್ಲರು ವ್ಯವಸ್ಥೆಯಲಿ. —ರಶ್ಮಿ, I-38.

ಹೀಗೆ ಸಪ್ತರ್ಷಿಗಳು ಗುಣಪ್ರಧಾನವಾದ, ವೃತ್ತಿಮೂಲವಾದ, ಪ್ರತಿಭಾಪೋಷಕವಾದ ಚತುರ್ವರ್ಣ ನಿರ್ಮಾಣ ಮಾಡಿ ವೈದಿಕ ಸಮಾಜದ ಭದ್ರ ಬುನಾದಿ ಹಾಕಿದರು. 'ರಶ್ಮಿ' ಕಾವ್ಯದ ವಿಶ್ವಾಮಿತ್ರ, ಜಮದಗ್ನಿ, ಪರಶುರಾಮರ ಜೀವನ ದರ್ಶನಗಳಲ್ಲಿ ಈ ಚಾತುರ್ವರ್ಣ ವ್ಯವಸ್ಥೆಯ ಸೂಕ್ಷ್ಮ ವಿಶ್ಲೇಷಣೆ ಬರುತ್ತದೆ; ಜನ್ಮಪ್ರಧಾನವಲ್ಲದ ಈ ವ್ಯವಸ್ಥೆಯ ಬಗೆಗೆ ಸದ್ಯಕ್ಕೆ ಕವಿಗಳ ಕೆಲವು ಮಾತುಗಳನ್ನಿಲ್ಲಿ ಗಮನಿಸಬಹುದು :

"ಗುಣಗಣನೆಯಿಂದಾಯ್ತು ಚತುರ್ವರ್ಣ ವ್ಯವಸ್ಥೆ
ಬೆನ್ನುಕಟ್ಟಿತು ತನ್ನ ಹುಟ್ಟಿಂದೆಸೆಯಲಿಲ್ಲ
ವ್ಯಕ್ತಿಯಾಗುತ ಬ್ರಹ್ಮವಿದ, ಕ್ಷತ್ರಿಯ, ವೈಶ್ಯ
ಶೂದ್ರರ ಮಕ್ಕಳಿದ್ದಿಹರು ಮೇಲಿನ ವರ್ಗಗಳ ಹೊಕ್ಕು
ಮೇಲಿನವರಿಳಿದಿಹರು, ಕ್ಷತ್ರಿಯ, ವೈಶ್ಯ, ಬ್ರಹ್ಮವಿದ
ಗುಣವಿಲ್ಲದಲೆ ಶೂದ್ರ ಪಂಥಲಿಕೆಯ ತುಳಿದು
ಸ್ವಭಾವ-ಸ್ವಗುಣದಂತಿರಲು ವರ್ಗೀಕರಣ
ಮೇಲುಕೀಳೆಂಬ ಭಾವನೆಯಿರದೆ ಬಾಳಿದನು
ವ್ಯಕ್ತಿಸಮುದಾಯದಲಿ. ವೇದಕಾಲಾವಧಿಯ
ಕೊನೆಕೊನೆಗೆ ಮುಗಿದಿರಲು ವೇದಕಾಲಸಮಾಜ,
ವಿಭವಗಳು ಲಯವಾಗಿ, ವಿವರ್ಣಗೊಳಿಸಿದವು
ವರ್ಗಮೀಮಾಂಸೆಯನು ಜಾತಿಬದ್ಧ ವಿಭೇದ
ಆನುವಂಶಿಕ ಮೇಲ್ಮೆ, ಮೇಲ್ಮೆ-ಕೀಳ್ಮೆಯ ಭಾವ,
ಪರಾಜಿತ ಶತ್ರುಗಣ ದಾಸ್ಯ ತಂದಿತ್ತು
ಚತುರ್‌ವರ್ಣರಾಜ್ಯದಲಿ ಪಂಚಮರೆಂಬ ಭಾವವನು
—ರಶ್ಮಿ, I-42

ಜಾತಿಬದ್ಧ ವಿಭೇದವಿಲ್ಲದೆ, ಆನುವಂಶಿಕತೆಗೆ ಅವಕಾಶವಿಲ್ಲದೆ, ಒಂದು ಸುಸಂಬದ್ಧ ಸಮಾಜ ರಚಿಸಿದ ಸಪ್ತರ್ಷಿಗಳೆ ಸ್ವಾಯಂಭುವಿನ ಅಂತಿಮ ಸಂಸ್ಕಾರವನ್ನು ಅಗ್ನಿಸಂಸ್ಕಾರವಾಗಿಸಿ ಮರಣವನ್ನೂ ಆರೋಗ್ಯಕರ ಪ್ರಸಂಗವನ್ನಾಗಿಸಿದರು. ಈ ಪ್ರಸಂಗವನ್ನು ಕವಿಗಳು ಅಗ್ನಿಸಂಸ್ಕಾರದ ವಿಶಿಷ್ಟ ಹಿರಿಮೆಯನ್ನು ಪ್ರಕಟಿಸಲು ಬಳಸಿದ್ದಾರೆ :

ಐಗುಪ್ತರ ಫ್ಯಾರೊ ದೊರೆಗಳಂತೆ ವಜ್ರವೈಡೂರ್ಯಸಹಿತ ಹುಗಿದು ಪೀರಮೀಡನು ಕಟ್ಟಬೇಕೆ? ಜಡಗುನಾಡ ಸ್ವೀಡರಂತೆ ದೋಣಿಯಲ್ಲಿ ಶವವಿಟ್ಟು ಬೆಂಕಿಹಚ್ಚಿ ಸಾಗರದಲ್ಲಿ ತೇಲಿಬಿಡಬೇಕೆ? ಗ್ರೀಕರಂತೆ ದೇಹಭಸ್ಮವಾಡಿ ಅಮೃತ ಶಿಲಾಕುಂಭದಲ್ಲಿ ಭಸ್ಮ ಕಾಯ್ದಿರಿಸಬೇಕೆ? ಯಾವುದೂ ಸರಿಯಲ್ಲ.

"ಐಗುಪ್ತದೈಸಿರಿಬೇಡ, ಐಹಿಕ ಸಂಪದಗಳನು
ಅನಾಗರಿಕ ರೀತಿಯಲಿ ಮೆರೆಸುವ ವಿಧಾನವದು
ಸ್ವೀಡರ ದೋಣಿಗಳು ಬೇಡ, ಸ್ಯಾದ್‌ವಾದದಲಿ ಮುಗಿದು
ಅಜ್ಞಾತವಿದೆ ದೋಣಿ ತೇಲಿ ತಲುಪಿದೆ ಲೋಕ
ಗ್ರೀಕರೆಸಕವು ಬೇಡ, ಕಾಲನನ್ನಣಗಿಸುತ
ಅಣಗಿಸಿಕೊಳಲು ಮುಂದೆ..........." —ರಶ್ಮಿ I-44.

ಸ್ವಾಯಂಭುವಿನ ದೇಹ ಭಸ್ಮವಾದರೂ ಮನ್ವಂತರಗಳಲ್ಲಿಯೂ ಆತನ ಚೇತನ ಸ್ಫೂರ್ತಿ ನೀಡುತ್ತಲೇ ಇರುತ್ತದೆ; ಮಾನವನ ಮುಂದಿನ ಗತಿ ಏನೆಂದು ವಿಶ್ವಾಮಿತ್ರರಂಥವರನ್ನು ಕೇಳುತ್ತಲೇ ಇರುತ್ತದೆ. ಏಳನೆಯ ಮನು ವೈವಸ್ವತನು ತನ್ನ ಆನಂದಶೋಧನೆಯಲ್ಲಿ ಸ್ವಾಯಂಭುವಿನ ಚಿತಾಭಸ್ಮವಿದ್ದ ದಶಾಂಗ ಪರ್ವತದ ಶಿಖರಕ್ಕೇರಿ ಚಿಂತಿಸುತ್ತಿರುವಾಗಲೆ ಪ್ರಳಯಸದೃಶ ಜಲಪ್ಲಾವನ ಕಂಡು, ಹೆಂಡತಿ, ಮಕ್ಕಳು ರಾಜ್ಯವೆಲ್ಲ ಭಯಂಕರ ಜಲಪ್ಲಾವನದಲ್ಲಿ ಮುಳುಗಿಹೋದಾಗ — ಬಾಲಮುಕುಂದನ ದರ್ಶನ ಪಡೆಯುತ್ತಾನೆ :

"ವೈವಸ್ವತನ ನಿಮೀಲಿತ ನೇತ್ರದೆದುರು
ಶೋಭನಾದ್ಭುತ ದೃಶ್ಯ : ಕರಾಳ ರಾತ್ರಿಯಲಿ
ಪ್ರಳಯದೇಕಾಂತದಲಿ, ತರಂಗಗಳ ತುಮುಲದಲಿ
ಸಾಗರದೆದೆಯ ಮೇಲೆ ಜ್ಯೋತಿ ನಂದದ ಕಂದ
ಔದುಂಬರ ವರ್ಣದ ಮೇಲೆ ನಂದಾದೀಪ ಥಾಳೈಸಿ!" ರಶ್ಮಿ, I-209.

ಇದೇ ದಶಾಂಗ ಪರ್ವತದ ಶಿಖರವನ್ನೇರಿ ನಿಂತು ಮಾನವಕುಲೋನ್ನತಿ ಅವನತಿಯ ಮೀಮಾಂಸಾಪ್ರಕ್ರಿಯೆ ನಡೆಸಿದ್ದಾನೆ ವಿಶ್ವಾಮಿತ್ರ :

"ಏರುವನು ಮುಗಿಲೆತ್ತರಕೆ
ನರ ತ್ಯಾಗದಿಂದಾದಿ ಮನು ಸ್ವಾಯಂಭುವಿನಂತೆ"

ಎಂದು ನಿರ್ಣಯಿಸಿದ್ದಾನೆ. ಇದು ಕನಸುಗಾರ ವಿಶ್ವಾಮಿತ್ರನ ನುಡಿಯಾದರೆ, ಸಿದ್ಧ-ಪರಿಪಕ್ವ ವಿಶ್ವಾಮಿತ್ರನು ಮನುಕುಲದ ಭವಿತವ್ಯ ಕುರಿತು ಚಿಂತಿಸುತ್ತಿರುವ ಸ್ವಾಯಂಭುವಿನ ಚೇತನಕ್ಕೆ ಹೇಳುವ ಮಾತು ಇನ್ನೂ ಅರ್ಥಪೂರ್ಣ.

"...............ಕುಲಪಿತಾಮಹ ! ನಿನ್ನ-
ನಾವರಿಸಿತೇ ಚಿಂತೆ ? ಕ್ಷರಾಕ್ಷರವ ದಾಟಿ
ನಿಂತ ಪುರುಷೋತ್ತಮನ ಚಿತ್ತವನರಿತ ದ್ರಷ್ಟಾರ!" —ರಶ್ಮಿ, II-720.

ಆದರೆ ಸ್ವಾಯಂಭುವ ಮನುವಿನ ದ್ರಷ್ಟಾರ ಚೇತನವೂ—

"ಮಿಂದೊಲುಮೆ ಚಿಲುಮೆಯಲಿ ಪಾವನನಾಗುವನು ನರನು
ಕುಲಾವತಂಸರು ಉದಿಸಿ ನಲಿಯುವದು ಮನುಕುಲವು" —ರಶ್ಮಿ, II-724.

ಎಂದು ವಿಶ್ವಾಮಿತ್ರನು ಆಶ್ವಾಸನೆ ನೀಡಿದಾಗಲೆ ಸಂತೃಪ್ತವಾಗುವದು.

ಶ್ರೀಭಗವಾನುವಾಚ—

ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ
ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ —ಗೀತಾ, 4-1.

[ಭಗವಂತನು ಹೀಗೆಂದನು—

ಈ ಅವ್ಯಯವಾದ ಯೋಗವನ್ನು ನಾನು ವಿವಸ್ವತ-ಸೂರ್ಯನಿಗೆ ಹೇಳಿದೆನು. ವಿವಸ್ವತನು ಮನುವಿಗೆ ಹೇಳಿದನು. ಮನುವು ಇಕ್ಷ್ವಾಕುವಿಗೆ ತಿಳಿಸಿದನು.]

(3) "I will pour delight from thee as from a jar,
I will whirl thee as my chariot through the ways,
I will use thee as my sword and as my lyre
I will play on thee my ministrelsies of thought"

—Sri Aurobindo: Savitri, P. 787-788.

(4) **ಓಂಕಾರ ಪುರುಷನ ವಾಣಿ**–(ವೈವಸ್ವತನಿಗೆ–)

"ವರ್ಷಿಸುವುದಾನಂದ, ನಿನ್ನ ಹರ್ಷೋದ್ಭವದಿ
ಹಿರಣ್ಮಯ ಕಲಶದಿಂದಮೃತ ಸುರಿದಂತಾಗಿ.
ನೀ ನನ್ನ ರಥ, ನವ್ಯಪಥಗಳಲ್ಲೋಡಿಸುವೆ!
ನನ್ನ ಖಡ್ಗವು ನೀನು ಸವರಣಾಂಗಣಗಳಲಿ!
ನೀನೆನ್ನ ವೀಣೆಯಿಹೆ. ನೀ ದೃಷ್ಟಿಸಿದ ಮಂತ್ರ
ನಿನ್ನ ತಂತ್ರಿಗಳೊಳಾಡುವವು ಓಂಕಾರದೊಲು"

—ರಶ್ಮಿ, I-222.

'ಭಾರತಸಿಂಧುರಶ್ಮಿ'ಯಲ್ಲಿ ವೈವಸ್ವತ ಮನುವಿನ ಸಾಧನೆ ತುಂಬಾ ಅರ್ಥಪೂರ್ಣವಾಗಿದೆ. ಸ್ವಾಯಂಭುವ ಮನುವಿನಿಂದ ವೈವಸ್ವತನವರೆಗೆ ಭರತಖಂಡದಲ್ಲಾದ ಮಾನವಪ್ರಜ್ಞಾವಿಕಾಸವು ಅಖಂಡವಾಗಿದೆಯಲ್ಲದೆ ಈ ವಿಕಾಸಚಿತ್ರಣದಲ್ಲೊಂದು ಖಚಿತ ರಚನಾಶಿಲ್ಪವಿದೆ. ವ್ಯಷ್ಟಿಪ್ರಜ್ಞೆ ಹಾಗೂ ಸಮಷ್ಟಿಪ್ರಜ್ಞೆಗಳ ಬೆಳವಣಿಗೆಯ ಹಜ್ಜೆಗಳನ್ನು ಸ್ಪಷ್ಟವಾಗಿ ಕಂಡರಿಸಲಾಗಿದೆ. ವೈವಸ್ವತ ಮನುವಾಗಲಿರುವ 'ಸತ್ಯವ್ರತ'ನು ದ್ರಾವಿಡ ದೇಶದ ರಾಜನೆಂದು ಭಾಗವತವು ಹೇಳುತ್ತದೆ. ಈ ಸತ್ಯವ್ರತ ರಾಜನಿಗೆ ಮತ್ಸ್ಯರೂಪದಲ್ಲಿ ಕಾಣಿಸಿಕೊಂಡ ಶ್ರೀಮನ್ನಾರಾಯಣನು ಪ್ರಳಯಜಲಧಿಯಲ್ಲಿ ಭಕ್ತಿ ಎಂಬ ನಾವೆಯಲ್ಲಿ ಈತನನ್ನು ಕುಳ್ಳಿರಿಸಿ ಬ್ರಹ್ಮನ ಹಗಲು ಬರುವವರೆಗೆ ರಕ್ಷಿಸಿ ಮನ್ವಂತರ ಬಂದಾಗ ಸತ್ಯವ್ರತನನ್ನೇ ವೈವಸ್ವತ ಮನು

ವನ್ನಾಗಿಸುತ್ತಾನೆ. ಪ್ರಳಯಜಲಧಿಯಲ್ಲಿ ಸಂಚರಿಸುತ್ತಿರುವಾಗಲೆ ಮತ್ಸ್ಯಾವ-ತಾರಿಯು ಪ್ರಕೃತಿ ಪುರುಷ ವಿವೇಕವನ್ನೂ, ಆತ್ಮಜ್ಞಾನವನ್ನೂ ದಿವ್ಯನಾವೆಯ ಸ್ವರೂಪದಲ್ಲಿರುವ ಭಕ್ತಿಯೋಗವನ್ನೂ ಸತ್ಯವ್ರತ ರಾಜನಿಗೆ ಉಪದೇಶಮಾಡಿದ ನೆಂದು ಭಾಗವತದ ಅಷ್ಟಮ ಸ್ಕಂಧ ತಿಳಿಸುತ್ತದೆ. ಮತ್ಸ್ಯಪುರಾಣದ ಮುಖ್ಯ ವಿಷಯವೂ ಇದೇ ಎಂಬ ಸೂಚನೆ ಅಲ್ಲಿದೆ.

ಈ ಕಥೆಯ ಮುಖ್ಯಾಂಶಗಳನ್ನು ಗಮನಿಸಿದಾಗ ಇದರಲ್ಲಿ ದ್ರಾವಿಡದೇಶ, ಹಡಗು–ಸಮುದ್ರಯಾನ–ಇತ್ಯಾದಿಗಳು ಐತಿಹಾಸಿಕವಾಗಿದ್ದರೂ ಸತ್ಯವ್ರತನ ವ್ಯಕ್ತಿತ್ವ ಸಾಂಕೇತಿಕವೆಂಬುದು ಸ್ಪಷ್ಟವಿದೆ. ಜ್ಞಾನಪರಂಪರೆಯ ಹಜ್ಜೆಗಳನ್ನು ಸಾಂಕೇತಿಕ ವಾಗಿ ಗುರುತಿಸುವದೂ ಅದಕ್ಕಾಗಿ Archetypal ಮೂಲವಾದರಿ ವ್ಯಕ್ತಿಗಳನ್ನು ಸೃಷ್ಟಿಸುವದೂ ಪುರಾಣತಂತ್ರವೆಂಬುದನ್ನಿಲ್ಲಿ ಗಮನಿಸಬೇಕು.

ಗೀತೆಯಲ್ಲಿ ವಿವಸ್ವಾನ್ ಸೂರ್ಯನು ಮನುವಿಗೆ ಗೀತೆಯ ಬುದ್ಧಿಯೋಗ ಹೇಳಿದನೆಂಬುದೂ ಪ್ರಜ್ಞೆಯ ವಿವಿಧ ನೆಲೆಗಳಿಂದ ಈ ಯೋಗ ಸ್ಫುರಿಸಿದ ಅಂಶವೂ ಸಾಂಕೇತಿಕವಾಗಿರುತ್ತದೆ. 'ಸಾವಿತ್ರಿ' ಮಹಾಕಾವ್ಯದಲ್ಲಿ ಅಶ್ವಪತಿಯು ಪ್ರಕೃತಿ–ಪುರುಷರ ವಿವೇಕವನ್ನು ಪಡೆದ ಬಗೆ–ಅದರ ಪರಂಪರೆಯ ಸ್ವರೂಪವನ್ನು ಚಿತ್ರಿಸಿದ್ದೂ ಹೀಗೆಯೇ ಅರ್ಥಪೂರ್ಣವಾಗಿದೆ—

''This knowledge First he had of *time born men*
Admitted through a curtain of bright mind
That hangs between our thought and absolute sight

*Savitri*, P. 84.

ಇಲ್ಲಿ timeborn men ಎಂಬ ಪದವೂ ನಮ್ಮ ವೈಚಾರಿಕ ನೆಲೆ ಹಾಗೂ ಪರಬ್ರಹ್ಮ ದೃಷ್ಟಿಗಳ (absolute sight) ಮಧ್ಯದ bright mind ಎಂಬ ಪರದೆಯೂ ನಮ್ಮ ವಿಚಾರದ ನೆಲೆಗೆ ಪರಮಾತ್ಮನ ಜ್ಞಾನವು ಹೇಗೆ ಇಳಿದು ಬರುವದೆಂಬ ಮಿಸ್ಟಿಕ್–ಅನುಭಾವಿಕ ಕ್ರಮವನ್ನೇ ಸೂಚಿಸುತ್ತವೆ.

ಈ ದೃಷ್ಟಿಯಿಂದ 'ಭಾರತಸಿಂಧುರಶ್ಮಿಯಲ್ಲಿಯ' ಸತ್ಯವ್ರತನೆಂಬ ವೈವಸ್ವತ ಮನು ಯಾವ ಜ್ಞಾನಪರಂಪರೆಯನ್ನುಳಿಸಿಕೊಂಡು ಹಾಗೂ ಆ ಪರಂಪರೆಗೆ ಯಾವ ವಿಶಿಷ್ಟ ಕಾಣಿಕೆಯನ್ನಿತ್ತು ಭಾರತೀಯ ಜೀವನ ಹಾಗೂ ಪ್ರಜ್ಞೆಗಳನ್ನು ಸಮೃದ್ಧ ಗೊಳಿಸಿದನೆಂದು ವಿವೇಚಿಸಬೇಕು.

ವಿಶ್ವಾಮಿತ್ರನ ಪೂರ್ವದಲ್ಲಿ ಭಾರತೀಯ ಜೀವನದ ಸ್ಥಿತಿಗತಿ ಹೇಗಿತ್ತು? ವೈವಸ್ವತನ ಸೂಕ್ತಗಳಲ್ಲಿ ಕಾಣುವ ಜೀವನದರ್ಶನವೆಂಥದು? ಈ ಪ್ರಶ್ನೆಗಳು ಕಾವ್ಯದ ಐತಿಹಾಸಿಕ ಅಥವಾ ಚಾರಿತ್ರಿಕ ಅಂಶಗಳ ಮೇಲೆ ಬೆಳಕು ಚೆಲ್ಲುತ್ತವೆ,

ಉಳಿದದ್ದು 'ಭಾರತಸಿಂಧುರಶ್ಮಿ'ಯ ಒಟ್ಟು ದರ್ಶನವನ್ನು ಅಭಿವ್ಯಕ್ತಗೊಳಿಸುತ್ತದೆ. ಸಾಮಾನ್ಯ ರಾಗದ್ವೇಷ, ಸುಖದುಃಖಗಳ ಆಚೆಗಿನ ಅಮೃತಸ್ವರೂಪವಾದ ಆನಂದ ಶೋಧಕನ ಮಾದರಿ ಪುರುಷನಾಗಿ ವೈವಸ್ವತ ಮನು ಇಲ್ಲಿ ರೂಪ ತಾಳಿದ್ದಾನೆ. ಹೀಗೆ ವೈವಸ್ವತನನ್ನು ಚಿತ್ರಿಸುವಲ್ಲಿ ಕವಿಗಳ ಔಚಿತ್ಯಪ್ರಜ್ಞೆ ವೇದ ಹಾಗೂ ಪೌರಾಣಿಕಾಂಶಗಳನ್ನು ಅದ್ಭುತವಾಗಿ ಬಳಸಿಕೊಂಡಿದೆ. ಈ ಔಚಿತ್ಯಪ್ರಜ್ಞೆಯ ಮೌಲಿಕತೆಯನ್ನರಿಯಬೇಕಾದರೆ ಕೆಳಗಿನ ಪ್ರಶ್ನೆಗಳಿಗೆ ತಕ್ಕ ಉತ್ತರಗಳನ್ನು ಸಹೃದಯನು ಕಂಡುಕೊಳ್ಳಬೇಕು :

೧) ವಿವಸ್ವತನಾಮಕವಾದ, ಮೃತ ಅಂಡದಂತಿರುವ ಮಾನವಸತ್ವವನ್ನು ಮಾರ್ತಾಂಡಾದಿತ್ಯನನ್ನಾಗಿ ಮಾಡಿದ ಅಯಾಸ್ಯನ ಸಾಧನೆ ಸತ್ಯವ್ರತನಿಂದ ಹೇಗೆ ಮುಂದುವರಿಯುತ್ತದೆ? ಈ ಮಾರ್ತಾಂಡ ಆದಿತ್ಯಪ್ರಜ್ಞೆಗೂ ಸತ್ಯವ್ರತ-ವೈವಸ್ವತ ಮನುವಿನ ಆನಂದಶೋಧನೆಗೂ ಯಾವ ಅನನ್ಯ ಸಂಬಂಧವಿದೆ ?

೨) ಈ ಆನಂದಸಿದ್ಧಿಗೂ ವೈವಸ್ವತನು ಅನುಭವಿಸಿದ ಪ್ರಳಯ ಹಾಗೂ ಅಲ್ಲಿ ಕಂಡ ಬಾಲ ಮುಕುಂದ ದರ್ಶನಕ್ಕೂ ಹತ್ತುಗಡೆಯುಂಟೆ ?

೩) 'ಸಾವಿತ್ರಿ' ಕಾವ್ಯದಲ್ಲಿ ಸಾವಿತ್ರಿ ಕಂಡ ಚತುಸ್ವರೂಪಿ ಓಂಕಾರಪುರುಷನ ದರ್ಶನವನ್ನೇ ವೈವಸ್ವತ ಮನು ಪಡೆದಂತೆ ಚಿತ್ರಿಸಿರುವದರಲ್ಲಿ ಯಾವ ಸಾಫಲ್ಯವಿದೆ?

೧) ಮೊದಲನೆಯದಾಗಿ, ವೈವಸ್ವತ ಮನುವಿನ ಹಿಂದೆ ಅಯಾಸ್ಯನು ಮೃತ ಅಂಡದಂತಿದ್ದ ಮಾನವಚೈತನ್ಯವನ್ನು ಸಂಜೀವನಗೊಳಿಸಿ ಮಾರ್ತಾಂಡನೆಂಬ ಆದಿತ್ಯ ಪದವಿಗೇರಿಸಿದ ಸಿದ್ಧಿ ವೈವಸ್ವತ ಮನುವಿನ ಸಾಧನೆಯ ಪೂರ್ವಪೀಠಿಕೆಯಾಗಿದೆ. ಮಾರ್ತಾಂಡನಾದ ಆದಿತ್ಯನ ಹೆಸರು 'ವಿವಸ್ವತ'ನೆಂದಿರುವುದು ತುಂಬಾ ಗಮನಾರ್ಹ ವಾಗಿದೆ. ಏಕೆಂದರೆ ಮಾನವತೆ ಮಾರ್ತಾಂಡವಾಗಿ – ಪ್ರಜ್ಞಾಜ್ಯೋತಿಯನ್ನು ಆವಿಷ್ಕರಿಸಿದರೂ ಆ ಋತಜ್ಯೋತಿಗೂ ಮೂಲವಾದ ಆನಂದವನ್ನು ಸಾಕ್ಷಾತ್ಕರಿಸಿ ಕೊಳ್ಳಬೇಕಾಗುತ್ತದೆ. ಈ ದೃಷ್ಟಿಯಿಂದ ವಿವಸ್ವತನಿಗೂ ವೈವಸ್ವತ ಮನುವಿಗೂ ಅರ್ಥಪೂರ್ಣ ಸಂಬಂಧವೇರ್ಪಡುತ್ತದೆ.

ಭಗವದ್ಗೀತೆಯ ನಾಲ್ಕನೆಯ ಅಧ್ಯಾಯದ ಪ್ರಾರಂಭದಲ್ಲಿ ಭಗವಂತನು, ಭಗವದರ್ಪಣಯುಕ್ತ ನಿವೃತ್ತಕರ್ಮಯೋಗವನ್ನು ವಿವಸ್ವಾನ್ ಸೂರ್ಯನಿಗೂ, ವಿವಸ್ವಾನನು 'ಮನು'ವಿಗೂ, ಮನು ಇಕ್ಷ್ವಾಕುವಿಗೂ ಉಪದೇಶಿಸಿದರೆಂದು ಹೇಳ ಲಾಗಿದೆ. ಇಲ್ಲಿರುವ ಆದಿತ್ಯಪ್ರಜ್ಞೆಯು "ಮಧುವಿದ್ಯೆ' ಎಂಬ ಧ್ವನಿ 'ಇಕ್ಷು' (ಕಬ್ಬು) ಎಂಬ ಪದದಲ್ಲಿ ಧ್ವನಿತವಾಗಿದೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಆದಿತ್ಯನೆ ಮಧು ಎಂದು ಸ್ಪಷ್ಟವಾಗಿ ತಿಳಿಸಲಾಗಿದೆ :

''ಅಸೌ ವಾ ಆದಿತ್ಯೋ ದೇವ ಮಧುಃ" (ಆ ಆದಿತ್ಯನೇ ದೇವತೆಗಳ ಮಧು)
(ಛಾಂದೋಗ್ಯ, 3-1)

'ಭಾರತಸಿಂಧುರಶ್ಮಿ'ಯ ವೈವಸ್ವತ ಮನುವು ಈ 'ಮಧುವಿದ್ಯೆ'ಯ ಆಚೆಗೆ ನೋಡುತ್ತಿದ್ದಾನೆ. ಅಂತೆಯೇ—

"ಮಧು ಪ್ರಸ್ರವಣದಿಂದ ತಣಿವುದೆ ದೇವಕಂಠ ತೃಷೆ?" (ರಶ್ಮಿ, I-197)

—ಎಂದು ಕೇಳುತ್ತಾನೆ.

"ಮಹಾಜ್ಯೋತಿ ದರ್ಶನ ದೀಪಿಸಿರುವ ಆನಂದ'ಕ್ಕೂ ಮೂಲವಾದ ನಂದದ, ಕುಂದದ ಆನಂದದ ನೆಲೆಗೇರಿ ನಿಲ್ಲುವ ಆಸೆ ವೈವಸ್ವತನಲ್ಲಿ ನಂದಾದೀಪದಂತೆ ಬೆಳಗಿತಂತೆ." ('ರಶ್ಮಿ', I-199)

ಹೀಗೆ ವಿವಸ್ವಾನ್ ಸೂರ್ಯನಿಗೂ ವೈವಸ್ವತ ಮನುವಿಗೂ ಅರ್ಥಪೂರ್ಣ ಸಂಬಂಧ ಕಂಡಿರುವದು 'ರಶ್ಮಿ' ಕವಿಯ ವೈಶಿಷ್ಟ್ಯ.

೨) ಎರಡನೆಯದಾಗಿ 'ರಶ್ಮಿ' ಕಾವ್ಯದ ಪ್ರಜ್ಞಾಕ್ಷೇತ್ರ, ಕಾರ್ಯಕ್ಷೇತ್ರ ಎಷ್ಟೇ ಆಳ ಎತ್ತರ ಬಿತ್ತರ ಪಡೆದಿರಲಿ–ಅದರ ಕೇಂದ್ರದೃಷ್ಟಿ ಮಾನವಪ್ರಜ್ಞೆಯ ಸ್ಥಿತಿಗತಿಗಳನ್ನು ಪ್ರಧಾನವಾಗಿ ಗಮನಿಸಿದೆ; ಭೂಮಿಯ ನೆಲೆಯಲ್ಲಿಯೇ ದೃಢವಾಗಿ ಕಾಲೂರಿ ನಿಂತಿದೆ.

ವೈವಸ್ವತ ಮನುವಿನ ದೃಷ್ಟಿಯಲ್ಲಿ—

"ಮನುಕುಲದ ಮಹೋನ್ನತಿಯು, ವಿಕಸನದ ಜೀವನವು
ವಿಶ್ವದಲಿ ಮತ್ತಾವ ಗಣಕಿಲ್ಲ, ಕುಲಕಿಲ್ಲ." —ರಶ್ಮಿ, I-200.

ನಾಲ್ಕು ಪುರುಷಾರ್ಥಗಳಲ್ಲಿ ಧರ್ಮ, ಅರ್ಥ, ಕಾಮಗಳ ಮೌಲ್ಯವಿವೇಕವು ಸ್ವಾಯಂಭುವನಾದ ವೈವಸ್ವತ ಮನ್ವಂತರದ ಮೊದಲೆ ಜನಜೀವನದ ಪ್ರಜ್ಞಾಭಾಗವಾಗಿತ್ತು, ಈಗ ಸರ್ವ ಜ್ಞಾನ ಹಾಗೂ ಕರ್ಮ ಧರ್ಮಗಳ ಫಲಸ್ವರೂಪಿ ಮೋಕ್ಷವೆಂಬ ಆನಂದಮೌಲ್ಯದ–ಪರಮಪುರುಷಾರ್ಥದ ಸಾಕ್ಷಾತ್ಕಾರವಾಗಬೇಕಿತ್ತು. ಅದು ವೈವಸ್ವತ ಮನುವಿನಿಂದ ಸಿದ್ಧಿಸುತ್ತದೆ. ಈ ಮೋಕ್ಷವೆಂಬ ಆನಂದ ಪುರುಷಾರ್ಥದ ಸಿದ್ಧಿ 'ಮಾನವಸತ್ವ'ದಲ್ಲಿಯೇ ಸಾಧ್ಯ. ಇದು ಸತ್-ಚಿತ್-ಆನಂದವೆಂಬ ತ್ರಿಧಾತುವಿನ ಅಖಂಡ ಭಾಗ್ಯಾನುಭೂತಿ.

"ಮಾನವನಂತೆ ಮಣ್ಣಿನಲಿ ಜನಿಸಿ ಮಣ್ಣಾಗುತ್ತ
ಮುಳು ಮುಳು ಅತ್ತು, ಪಿಸಿ ಪಿಸಿ ನಕ್ಕು, ನರಳಾಡಿ, ಹೊರಳಾಡಿ
ಕುಣಿಕುಣಿದು, ಚಿಂತಿಸಿ, ಧ್ಯೇನಿಸಿ, ಭೋಗ–ಯೋಗಗಳ
ಸಾಧನೆಯಲಿ ಭಾವ-ಬುದ್ಧಿ-ಕರ್ಮದ ಮಿಲನ
ಸಾಧಿಸುತ ಬೆಳಗುತಿರಲಾತ್ಮಜ್ಞಾನೋದಯವು
ಸಚ್ಚಿದಾನಂದದಲಿ ಬೆರೆವ ಭಾಗ್ಯವ ಪಡೆವ
ಆದಿತ್ಯರಿಗಿಲ್ಲವೀ ಪೂರ್ಣತೆಯ ಸಿದ್ಧಿ. —ರಶ್ಮಿ, I-200.

ಇಲ್ಲಿ ಆದಿತ್ಯರೆಂದರೆ, ಮಿತ್ರಾವರುಣರು, ಆರ್ಯಮನ್, ಸೂರ್ಯ, ಸಾವಿತ್ರಿ, ಭಗ, ಪೂಷಣರೆಂಬ ಸಪ್ತಸೂರ್ಯರು. ಎಂಟನೆಯ ಮಾರ್ತಾಂಡನು-ಮಾನವ ಚೇತನಸ್ಥ ಆದಿತ್ಯನಾಗಿದ್ದು ಅವನು ವಿಕಸನಶೀಲ, ಮೋಕ್ಷಕಾಮಿ ಆನಂದಾರ್ಹನು.

ಹೀಗೆ ವಿವಸ್ವಾನ್ ಸೂರ್ಯನಿಗೂ (ಮಾರ್ತಾಂಡನಿಗೂ) ವೈವಸ್ವತ ಮನು ವಿಗೂ ಅನನ್ಯ-ಅನಿವಾರ್ಯ ಸಂಬಂಧವಿರುವಂತೆ 'ರಶ್ಮಿ' ಕಾವ್ಯ ಚಿತ್ರಿಸಿದ್ದು-ಭಗವದ್ಗೀತೆಯಲ್ಲಿ ಇದರ ಸಾಂಕೇತಿಕ ಧ್ವನಿಯಿರುವದು. ಗಾಯತ್ರೀಮಂತ್ರವು-ಸವಿತೃಧ್ಯಾನದಿಂದ ಬುದ್ಧಿ ಪ್ರಾಣಗಳ ಪ್ರಚೋದನೆಯಾಗಲೆಂದು ಪ್ರಾರ್ಥಿಸುತ್ತದೆ. ಇದು ಸೂರ್ಯ ಹಾಗೂ ಮನಸ್ಸುಗಳ ಅನನ್ಯಸಂಬಂಧ ಹೇಳುವದರ ಜೊತೆಗೆ ರಾಜರ-ರಾಜರ್ಷಿಗಳ ಬ್ರಾಹ್ಮ-ಕ್ಷಾತ್ರ ಸಂಬಂಧವನ್ನೂ ಧ್ವನಿಸುತ್ತದೆ. ಆದರೆ ಗೀತೆಯಲ್ಲಿ 'ವಿವಸ್ವಾನ್'' ಹೆಸರಿನ ಸೂರ್ಯನ ವೈಶಿಷ್ಟ್ಯವು ತಿಳಿಯುವದಿಲ್ಲ. 'ರಶ್ಮಿ' ಕಾವ್ಯದಲ್ಲಿ ವಿವಸ್ವತ ಸೂರ್ಯನು ಮಾರ್ತಾಂಡನಾಗಿ – ವೈವಸ್ವತ 'ಮನು 'ವಿಗೆ ಅನಿವಾರ್ಯ ಸಂಬಂಧ ಪಡೆಯುತ್ತಾನೆ.

೩) ವೈವಸ್ವತ ಮನುವಿಗೂ ಪ್ರಳಯ ಅಥವಾ ಜಲಪ್ಲಾವನಕ್ಕೂ ಆತನ ಆನಂದಶೋಧನೆಗೂ ಅರ್ಥಪೂರ್ಣ ಸಂಬಂಧವಿದೆ. ಅದೇ ರೀತಿಯಲ್ಲಿ ಕಾಲ ಕಾಲೇಶ್ವರನ-ಶಿಂಶುಮಾರನ ದರ್ಶನ ವೈವಸ್ವತನಿಗೆ ಮೊದಲು ಲಭ್ಯವಾಗಿ ಆಮೇಲೆ ಓಂಕಾರ ಸ್ವರೂಪಿ ಪರಮಾತ್ಮನ ಸಾಕ್ಷಾತ್ಕಾರವಾದಂತೆ 'ರಶ್ಮಿ' ಕಾವ್ಯ ಚಿತ್ರಿಸುವದೂ ಅರ್ಥಪೂರ್ಣವಾಗಿದೆ.

ಪ್ರಳಯವೆಂಬುದು ಶೂನ್ಯಾವಸ್ಥೆಯಲ್ಲ. ಪ್ರಳಯ ಜಲಧಿಯಲ್ಲಿ ಆಲದೆಲೆ ಯೆಂಬ ಪರಾಪ್ರಕೃತಿಯ ಮೇಲೆ-ಅಥವಾ ಕ್ಷೀರಸಾಗರವೆಂಬ ಆನಂದೋದಧಿಯಲ್ಲಿ ಅನಂತಶಯನನಾಗಿ ನಾರಾಯಣನಿದ್ದಾನೆಂಬುದೇ ಭಾಗವತದರ್ಶನ. ವೈವಸ್ವತನಿಗೂ ಬಾಲಮುಕುಂದ ದರ್ಶನವಾಗುತ್ತದೆ. ಪರಮಾತ್ಮನು ಆನಂದಮಯನೆಂಬುದೂ ಇದೇ ಅರ್ಥದಲ್ಲಿ. ಆನಂದಮಯನೊಡನೆ ಯೋಗ ಹೊಂದಬೇಕೆಂದೇ ಬ್ರಹ್ಮಸೂತ್ರ ಹೇಳುತ್ತದೆ.

'ಅಸ್ಮಿನ್ ಅಸ್ಯ ಚ ತದ್ಯೋಗಂ ಶಾಸ್ತಿ' —I, I-19.

[ಮತ್ತು ಇವನಲ್ಲಿ (ಆನಂದಮಯನಲ್ಲಿ) ಇವನ (ಜೀವನ) ತದ್-ಯೋಗವನ್ನು (ಶಾಸ್ತ್ರವು) ಉಪದೇಶಿಸುತ್ತದೆ.]

'ರಶ್ಮಿ' ಕಾವ್ಯದಲ್ಲಿ ಧ್ರುವಮಂಡಲವನ್ನು ಸವಿತೃರೂಪದಲ್ಲಿಯೂ ಮೇರುಗಿರಿಯನ್ನು ಬಾಲಮಾರ್ತಾಂಡನಾಗಿಯೂ ಸುತ್ತುತ್ತಿರುವ ಸೂರ್ಯನು-

''ಜೀವಜಾತದ ಸಕಲ ಹೃದಯದಲಿ ಮಿಡಿಯುತಿಹ
ಪ್ರೇಮ ಪ್ರಜ್ಞೆಗೆ ಪ್ರಳಯವಿಲ್ಲೆಂದೊರೆದಿಹನಾತ'' —ರಶ್ಮಿ, I-201.

ಆನಂದಮಯ ಪರಮಾತ್ಮನಿಗೆ 'ಪ್ರಿಯಂ' ಎಂಬುದೇ ಶಿರಸ್ಸೆಂದು ತೈತ್ತಿರೀಯ ಉಪನಿಷತ್ತು ಸಾರುತ್ತದೆ. ಪ್ರೇಮವೂ ಅಮೃತಸ್ವರೂಪವೇದೇ ಇದರ ತಿರುಳು.

ಸಾವು ತಂದೊಡ್ಡುವ ವಿನಾಶದಿಂದ ಸ್ಥೂಲದೇಹ-ಸ್ಥೂಲ ಪ್ರಪಂಚ ಕಳಚಿದರೂ ಸೂಕ್ಷ್ಮಶರೀರವಿರುತ್ತದೆ. ಆದರೆ ಪುನಃ ಹೊಸ ದೇಹ ತಳೆದು ಪುನರ್ಜನ್ಮ ಪಡೆಯುತ್ತದೆ.

ಈ ವಾಸ್ತವ ಸತ್ಯವನ್ನು ಶಿಂಶುಮಾರ ದರ್ಶನದಲ್ಲಿ-ಬಾಲವನ್ನು ಬಾಯಲ್ಲಿ ಹಿಡಿದ ಮಕರರೂಪದ ಪರಮಾತ್ಮನ ಸಾಂಕೇತಿಕ ಚಿತ್ರದಲ್ಲಿ ಮೂಡಿಸಲಾಗಿದೆ.

> "ಮಹಾಪ್ರಳಯದ ಸಮಯ, ಬಣ್ಣಬಣ್ಣದ ವಿಶ್ವ
> ಬಣ್ಣವು ಬಿಚ್ಚಿಬೀಳುತಿರೆ ಬಾಲವನು ಕಚ್ಚುವನು
> ಶಿಂಶುಮಾರನು ತನ್ನ ಬಾಯೊಳಗಿಟ್ಟು, ತುದಿ-ಮೊದಲು
> ಒಂದಿರಲು : ಸಾವಿನೊಳು ಹುಟ್ಟು ಅಸ್ತದೊಳುದಯ !
> ನವಸೃಷ್ಟಿಗೋಮ್ ಸ್ವಸ್ತಿ. ಮಹಾಮಂಗಲವಾಗ."　—ರಶ್ಮಿ, I-203.

'ರಶ್ಮಿ' ಕಾವ್ಯದಲ್ಲಿ ವೈವಸ್ವತ ಮನು-ಸತ್ಯವ್ರತ-ನಿಗೆ ಶಿಂಶುಮಾರ ದರ್ಶನವಾದ ಭಾಗ ತುಂಬ ಸುಂದರ, ಅರ್ಥಪೂರ್ಣ. ಭೂಮಪ್ರತಿಮೆ (Cosmic Image) ಇಲ್ಲಿ ಅದ್ಭುತವಾಗಿ ಮೈದಾಳಿದೆ. ಸರ್ವನಾಶದಲ್ಲಿಯೂ ಧೃತಿಗಡದೆ ನವಸೃಷ್ಟಿಯ ದಿವ್ಯಸಂಕಲ್ಪವನ್ನು ಕಾಯ್ದುಕೊಳ್ಳಲು ವೈವಸ್ವತ ಮನುವಿಗೆ ಪ್ರೇರಣೆ ಇತ್ತ ರೂಪವಿದು.

ಕಾಲಸಂಕೇತನಾದ ಈ ವ್ಯಕ್ತಸಾಂತ ಭಗವಂತನಿಗೆ, ಕೋಟಿ ಸ್ವಪ್ನಗಳನ್ನು ಕುಡಿಯಲ್ಲಿ ಚಿವುಟಿ, ಗಂಡುಗನಸುಗಳನ್ನು ವಿಶ್ವಗಳಗಲ ಹಬ್ಬಿಸುತ್ತ ಸಂವರ್ಧಿಸುವ ಈ ಕಾಲೇಶ್ವರನಿಗೆ-

> "ಬಲಮುರಿ ಶಂಖದಂತಿಹುದು ಶಿಂಶುಮಾರನ ರೂಪ
> ಘಟ್ಟಮಾರ್ಗದ ಮೇಲೆ ಮಾರ್ಗ, ಮುರಿ ಮೇಲೆ ಮುರಿ
> ಸರ್ವದೇವತಾಸ್ವರೂಪ ಮಂಗಲಚಕ್ರ
> ಧರಿಸಿದೆ ದ್ಯುಮಂಡಲವ, ಮುತ್ತುರತುನಗಳಂತೆ.
> ಸಿಂಗರಿಸಿದೆ ಮೆಯ್ಯ, ಗ್ರಹತಾರೆ ಸೆಕ್ಕಿಸಿಕೊಂಡು.
> ಬಾಯೊಳು ಸೂರ್ಯ, ಮೇಲೆತ್ತಿದ ಬಾಲದಲಿ ಧ್ರುವ, ಕೂರ್ಮ
> ಸಮಸ್ತ ಜ್ಯೋತಿರ್ಮಂಡಲಾಧಾರವಾಗಿಹುದು
> ಕಾಲಚಕ್ರಗತಿ ಕೆಳಬಿಂದುವಿರೆ ಸೂರ್ಯ."　—ರಶ್ಮಿ, I-202.

ಶ್ರೀ ಅಂಬಿಕಾತನಯದತ್ತರ "ಹಕ್ಕಿ ಹಾರುತಿದೆ ನೋಡಿದಿರಾ" ಎಂಬ ಕಾಲ ಸಂಕೇತದ ಅದ್ಭುತ ಕವನವನ್ನು ಬಿಟ್ಟರೆ ಇಂಥ ವಿಶ್ವವ್ಯಾಪಕ ಪ್ರತಿಮಾ ಮಾಲೆ ಬೇರೆಡೆಗೆ ಸಿಗುವದಿಲ್ಲ.

"ಬ್ರಹ್ಮಾಂಡಗಳನು ಒಡೆಯಲು ಎಂದೋ
ಬಲ್ಲರು ಯಾರಾ ಹಾಕಿದ ಹೊಂಚ...."

ಎಂದು ಶ್ರೀ ಅಂಬಿಕಾತನಯದತ್ತರು ಹೇಳಿದಂತೆ ಬ್ರಹ್ಮ ಅಂಡಗಳನ್ನು ಒಡೆದು ಹೊಸ ಬ್ರಹ್ಮಸೃಷ್ಟಿಗೆ ಕಾರಣವಾಗುವಂಥ ಶಕ್ತಿ ಶಿಂಶುಮಾರದೇವನಿಗುಂಟು. ಆ ಸೂಚನೆಯನ್ನೇ ಆತನು ವೈವಸ್ವತ ಮನುವಿಗೆ ನೀಡುತ್ತಾನೆ. ಅದರಂತೆ ವೈವಸ್ವತನ ಬಾಳಿನಲ್ಲಿ ಪ್ರಳಯವೂ ಬರುತ್ತದೆ. ಅದರಲ್ಲಿ ಶ್ರದ್ಧಾ ಎಂಬ ಹೆಂಡತಿಯೇ ಮೊದಲಾಗಿ ಸಮಸ್ತವೂ ಮುಳುಗಿಹೋಗುತ್ತವೆ. ಆದರೆ ಆ ವಿನಾಶದ ಜಲಧಿಯಲ್ಲಿ ಅವಿನಾಶಿ ಬಾಲಮುಕುಂದನ ದರ್ಶನವೂ, ನವರಾಷ್ಟ್ರೋದಯದ ಆದೇಶವೂ ಹೊಳೆಯುತ್ತವೆ. ಪರಂಪರೆಯಲ್ಲಿ ಮುಕುಂದನೆಂದರೆ ಮುಮುಕ್ಷು ಉಪಾಸ್ಯನೆಂದೇ ಅರ್ಥೈಸುತ್ತಾರೆ. ವೈವಸ್ವತನೂ ಮೃತ್ಯುಮುಖದಲ್ಲಿ ನಿರ್ಭೀತನಿಹ ಸಮಯದಲ್ಲಿಯೇ ಆನಂದದುಗಮವನು ಗುರುತಿಸಲು ಸಮರ್ಥನಾಗುತ್ತಾನೆ; ಪೋಷಣೆಗೆ ಬಾಹ್ಯಸುಖ ಬೇಕಿಲ್ಲ. ಎಂದೂ ಬತ್ತದ ಅಂಗುಷ್ಠ ನಿರ್ಝರಿಣಿ ಯಂತೆಯೇ ಸ್ವಾನಂದಾಸ್ವಾದಿಯಾದವನಿಗೇ ಸದಾ ಸಾವಧಾನತೆ.

'ನೀಲಮೇಘಶ್ಯಾಮ ಶಿಶುವಿಹುದು ಪ್ರಳಯೋದಕದ
ವಜ್ರರಸಾಂಕಿತದೊಳಸಹಾಯವೆಂಬಂತೆ.
ಆದರೊರಗಿಹುದು ಸಾಗರದಲ್ಲೋಲ ಕಲ್ಲೋಲ
ತುಮುಲದಲಿ ಸಾವಧಾನತೆಯೆ ಮೈಯ್ವೆತ್ತಂತೆ
ಸರ್ವಮಯ, ಅಚಲ, ಅಧ್ವನಿಕ, ಆನಂದಮಯ! ರಶ್ಮಿ, I–210.

ಇಂಥ ಸ್ವಾನಂದಾನುಭೂತಿ, ಸಾವಧಾನತೆ, ನಿರ್ಭೀತಿಗಳಿದ್ದ ವೀರಪುರುಷನೆ ನವರಾಷ್ಟ್ರ ನಿರ್ಮಾಪಕನಾಗಬಲ್ಲ. ವೈವಸ್ವತ ಮನುವಿನಲ್ಲಿ ಅಂಥ ನಿರ್ಮಾಣ ಕ್ಷಮತ್ವವಿತ್ತು.

ಈ ಆನಂದವು ಬರಿ ಮೈಮರೆಯಿಸುವ ಮದೋನ್ಮತ್ತತೆಯಲ್ಲ. ವಿಶ್ವ ವಿಮುಖ ಕೈವಲ್ಯವಲ್ಲ; ಸಾರ್ವಭೌಮಿಕೆಯತ್ತ ಮುನ್ನಡೆಯಿಸುವ ಸೃಜನಶೀಲ ಸತ್ತ್ವಾನುಭೂತಿಯಿದು.

ಈ ಸೃಜನಶೀಲ ಸತ್ವ–ಸಾರ್ವಭೌಮಿಕ ಶಕ್ತಿ ಸ್ವಾರ್ಥನಿಷ್ಠವಾಗಿಯೇ ಉಳಿದರೆ ರಾಕ್ಷಸೀಯವಾಗುವದು. ಸಾಧಕನಲ್ಲಿ ಜಾಗೃತವಾದ ನಿರ್ಭೀತ ಆತ್ಮವಿಶ್ವಾಸ, ಸೃಜನಶೀಲ ಸಂಕಲ್ಪಶಕ್ತಿಯು ರಾಕ್ಷಸೀಯವಾಗದಿರಬೇಕಾದರೆ ವಿಶ್ವದ ಸಮಸ್ತ ಶಕ್ತಿಗೊಡೆಯನಾದ ಪರಮಾತ್ಮನ ಸಂಕಲ್ಪಶಕ್ತಿಗೆ ಶರಣಾಗಿ ಆತನ ಸಂಕಲ್ಪಾಭಿ-ವ್ಯಕ್ತಿಯ ವಾಹಕನಾಗುವದೇ ಪರಮ ಸಿದ್ಧಿ.

೩) ವೈವಸ್ವತ ಮನುವು ಅಂಥ ಪರಮಸಿದ್ಧಿಯತ್ತ ಸಾಗುವ ಪ್ರೇರಣೆ ಯನ್ನು ಬಾಲಮುಕುಂದ ದರ್ಶನದಿಂದ ಪಡೆಯುತ್ತಾನೆ; ನವರಾಷ್ಟ್ರನಿರ್ಮಾಣದ

ಸಂಕಲ್ಪ, ಒಬ್ಬ ವೀರಪುರುಷನ ಮಹತ್ವಾಕಾಂಕ್ಷೆಯಲ್ಲ; ಅದು ಪರಮಾತ್ಮನ ದಿವ್ಯ ಸಂಕಲ್ಪ: ಅದು ಆ ಪರಮಾತ್ಮನತ್ತ ಸಾಗಬೇಕು.

ಯಾರು ಮುನ್ನಡೆಯಿಸುವವರು? ವೈವಸ್ವತನಿಗೆ ತಾನು ಬಿಡಲಿರುವ ತರ್ಪಣದ ಬೊಗಸೆಯಲ್ಲಿ ಕಿರುಮೀನಾಗಿ ಕಾಣಿಸಿಕೊಂಡ ಮತ್ಸ್ಯಾವತಾರಿ–ವೇದ ಪುರುಷನೆ ಮಾರ್ಗದರ್ಶಕ. ಬೊಗಸೆಯಲ್ಲಿ ಕಾಣಿಸಿಕೊಂಡ ಕಿರುಮೀನವು ತೊಟ್ಟಿ, ಕೊಳ, ಸಮುದ್ರಗಳನ್ನೂ ತುಂಬಿ ಬೆಳೆದು–ತ್ರಿಪದಸ್ಥ ವಿಷ್ಣುವಿನಂತೆ ಬೃಹದಾಕಾರ ವಾಗುತ್ತದೆ. ಆ ಮತ್ಸ್ಯಾವತಾರಿಯ ದರ್ಶನದ ಪ್ರಥಮ ಲಾಭವೆಂದರೆ ಔದುಂಬರ ರೂಪದಲ್ಲಿ ಶ್ರದ್ಧೆ ಮರಳುತ್ತದೆ. ಆ ನೂತನ ಶ್ರದ್ಧಾದೇವಿಯನ್ನು ಪತ್ನಿಯನ್ನಾಗಿ ಸ್ವೀಕರಿಸಿ ಆಕೆಯ ರಕ್ಷೆಯಲ್ಲಿ ತಪಸ್ಸುಮಾಡಿ ಓಂಕಾರರೂಪನನ್ನು ಸಾಕ್ಷಾತ್ಕರಿಸಿ ಕೊಳ್ಳುತ್ತಾನೆ.

ಸತ್ಯವ್ರತನು ಅನುಭವಿಸಿದ ಪ್ರಳಯ ಅತ್ಯಂತ ಕರುಣಾದ್ಭುತವಾಗಿ ಮಾನವೀಯವಾಗಿ ರಶ್ಮಿಯಲ್ಲಿ ಚಿತ್ರಿತವಾಗಿದೆ. ಇಜಿಪ್ತ ದೇಶದ ಪಿರಮಿಡಗಳ ತಳದಲ್ಲಿ ಸಾಮ್ರಾಟರು ರಾಜವೈಭವದೊಡನೆ ಪರಿವಾರಸಹಿತ ಹೂಳಲ್ಪಟ್ಟಂತೆ– ಸತ್ಯವ್ರತ ಮಹಾರಾಜನ ಹೆಂಡಿರು ಮಕ್ಕಳು ವೇಷಭೂಷಣಸಹಿತವಾಗಿ ಪ್ರಳಯಜಲ ದಲ್ಲಿ ಮುಳುಗಿಹೋಗಿದ್ದಾರೆ. ಮುಳುಗಿದ ಅರಮನೆಯಲ್ಲಿ—

"ಸಾಕಿದಂತಿವೆ ಸದಾ ಸಾಕಿದಲ್ಲಿಯೆ ತೃಪ್ತ
ಮೃಗ–ಪಕ್ಷಿ ಕಾದಿಹುದು ಶಯ್ಯಾಗಾರ ದಂಪತಿಯ
ನಿದ್ರೆಯಲಿ ಸ್ತಬ್ಧ ಸಂತತ ತೂಗುದೊಟ್ಟಿಲಲಿ ಮಗು
ಜಗುಪ್ತರ ಹೂಳುಮನೆಯೊಳಿಲ್ಲೀ ಹಿರಿಮೆ?...." —ರಶ್ಮಿ, I–215.

ಕರುಳು ಕಿತ್ತುಬರುವಂತಹ ದಾರುಣ ಸನ್ನಿವೇಶವನ್ನು ಸೃಷ್ಟಿಸಿ, ಇಂಥ ವಿನಾಶದ ಗರ್ಭದಿಂದಲೇ ನೂತನ ರಾಷ್ಟ್ರವೊಂದೂ ರೂಪುಗೊಳ್ಳುವಂತೆ ಮಾಡಿರು ವದರಲ್ಲಿ ಕವಿಯ ದಾರ್ಶನಿಕ ರಸದೃಷ್ಟಿಯಿದೆ. ಇಂಥ ದೃಶ್ಯಮಾಲಿಕೆಗಳಿಂದಲೇ 'ರಶ್ಮಿ' ಕಾವ್ಯ ಹಜ್ಜೆಹಜ್ಜೆಗೆ ಮಾನವೀಯ ಸಂಸ್ಪರ್ಶ ನೀಡುತ್ತದೆ. ಇದು ನಮ್ಮ ನಿಮ್ಮ ಜನ್ಮಜನ್ಮಾಂತರದ ಜೀವನದರ್ಶಕ ಕಾವ್ಯವೆಂದು ಅನುಭವಕ್ಕೆ ಬರುತ್ತದೆ.

ಸತ್ಯವ್ರತನಲ್ಲಿ ಒಂದು ಅನುಪಮ ವೀತರಾಗ ಹುಟ್ಟುತ್ತದೆ. ಆದರೆ ಅದು ಆತನನ್ನು ನವಮನ್ವಂತರಾಧಿಪತಿಯಾಗುವತ್ತ ಕೊಂಡೊಯ್ಯುತ್ತದೆಯಲ್ಲದೆ, ಜೀವನ ದಿಂದ ವಿಮುಖಗೊಳಿಸುವದಿಲ್ಲ. ಅಂತೆಯೇ ಆತನ ಔದುಂಬರಾಣಿಯ ಪ್ರೇಮರಕ್ಷೆ ದೊರಕಿದೊಡನೆ ಪುನಃ ಅಂತರ್ಮುಖಿಯಾಗಿ ಆನಂದದುಗಮಶೋಧನೆಗಿಳಿದು ಚತುರೂಪಿ ಓಂಕಾರಪುರುಷನನ್ನು ಒಳಗಣ್ಣಿನಿಂದ ಕಾಣುತ್ತಾನೆ.

ಶೈಕ್ಷಣಿಕವಾಗಿಯೂ ತುಂಬಾ ಅರ್ಥಪೂರ್ಣವಾದ ಅನುಭೂತಿ ಇದು. ಇಡಿ

ವ್ಯಕ್ತಿತ್ವದ ಅಖಂಡತೆಯನ್ನು ಓಂಕಾರ ಸಾಧಿಸುತ್ತದೆ ; ಏಕೆಂದರೆ ಜಾಗೃತಿ, ಸ್ವಪ್ನ, ಸುಷುಪ್ತಿ ಹಾಗೂ ತುರೀಯ ನೆಲೆಗಳವರೆಗೆ–ಹರಡಿದ ಚೈತನ್ಯದ ಬಗೆಗೆ–ಪ್ರಜ್ಞೆ ಆನಂದಗಳ ಬಗೆಗೆ ಸತ್ಯವ್ರತನೀಗ ಎಚ್ಚರಗೊಳ್ಳುತ್ತಾನೆ. ಹೊರಗಿನಿಂದ ಬಾಹ್ಯ ಜಗತ್ತು–ವೈಶ್ವಾನರನಾಗಿ, ಸಮಸ್ತ ದೇವತಾಪ್ರಪಂಚ ಹಿರಣ್ಯಗರ್ಭರೂಪವಾಗಿ, ಅವ್ಯಕ್ತವು ಅದಿತಿಮಾತೆಯು ಈಶ್ವರೀನೆಲೆಯಾಗಿ ಅದರಾಚೆಗೆ ಸಚ್ಚಿದಾನಂದದ ತ್ರಿಧಾತುಸ್ವರೂಪಿ ತುರೀಯ ಪುರುಷನನ್ನು ಕಾಣುತ್ತಾನೆ. ಮಾಂಡೂಕ್ಯೋಪನಿಷತ್ತಿನ ಈ ತುರೀಯ ಪುರುಷನನ್ನೇ "ಆತ್ಮಾ" ಎಂದು ಕರೆದಿದ್ದು "ಸ ಆತ್ಮಾ ಸ ವಿಜ್ಞೇಯಃ" ಎಂದು ಹೇಳಲಾಗಿದೆ. 'ಸಾವಿತ್ರಿ' ಕಾವ್ಯದಲ್ಲಿ ಸಾವಿತ್ರಿಗೆ ಕಂಡ ಈ ಪರಮಪುರುಷನ ವರ್ಣನೆಯನ್ನು ಶ್ರೀ ಅರವಿಂದರು ಅನನ್ಯ ವಾಕ್ಕಿನಲ್ಲಿ ಮೂಡಿಸಿದ್ದಾರೆ–

''The bliss that made the world in his body lived.
Love and delight were the hand of the sweet form''
*Savitri,* P. 765.

''ವಿಶ್ವವ ಹೆತ್ತ ಹಿಗ್ಗು ಮಿನುಗಿತು ಮುಖದ ಕಾಂತಿಯಲಿ
ಪ್ರೇಮ, ಆನಂದವಾ ಸುಭಗಾಕೃತಿಗೆ ಶಿರವು....'' —ರಶ್ಮಿ, I–219.

'ಮುನಿ' ಎಂಬ ಹೆಸರು ಈ ಓಂಕಾರಸಾಕ್ಷಾತ್ಕಾರಿಗೇ ಎಂದು ಮಾಂಡೂಕ್ಯೋಪನಿಷತ್ತು ಹೇಳುತ್ತದೆ.

''ಓಂಕಾರೋ ವಿದಿತೋ ಏನ ಸ ಮುನಿಃ ನ ಇತರೋ ಜನಃ''
—ಮಾಂಡೂಕ್ಯ, 4-7.

ಋಷಿ ಹಾಗೂ ಮುನಿಗಳು ಪರಸ್ಪರ ವಿರೋಧಿಗಳಲ್ಲ. ಆದರೆ ಈ ಪದಗಳನ್ನು ಪ್ರತಿನಿಧಿಸುವ ದಾರ್ಶನಿಕರಿಗೆ ವಿಶಿಷ್ಟ ಸಿದ್ಧಿ ಉಂಟು. 'ಋಷಿಗಳು'–ಎಂದರೆ ಐತರೇಯ ಉಪನಿಷತ್ತು ಹೇಳುವಂತೆ ಆದಿತ್ಯೋಪಾಸಕರು. ಸಮಸ್ತ ವಿಶ್ವವನ್ನು ಬೆಳಗುವ ಆದಿತ್ಯಾಂತರ್ಗತ ಪರಮಾತ್ಮನನ್ನೇ ತಮ್ಮ ಹೃದಯದಲ್ಲಿಯೂ ಕಂಡು 'ಸೋಹಮಸ್ಮಿ' ಎಂದು ಉಪಾಸನೆ ಮಾಡುವವರು.

ಪರಮಾತ್ಮನನ್ನು ನಿರಾಕರಿಸದೆ ಉಪಾಸನೆ ಮಾಡುವ ಮೂರು ಬಗೆಯ ಚೇತನಗಳಲ್ಲಿ ದೇವತೆಗಳು "ಪವಮಾನ" ಅಂತರ್ಗತನನ್ನೂ ಮನುಷ್ಯರು ಅರ್ಕರೂಪಿ ಅಗ್ನಿಮಂತರ್ಗತ – ಕರ್ಮೋಪಾಸ್ಯ ಪರಮಾತ್ಮನನ್ನು ಉಪಾಸಿಸುತ್ತಾರೆಂದು ಐತರೇಯ ಉಪನಿಷತ್ತು ತಿಳಿಸುತ್ತದೆ. 'ರಶ್ಮಿ' ಕಾವ್ಯದಲ್ಲಿ ಸಪ್ತರ್ಷಿಗಳ ಸಾಧನೆಯನ್ನು ಮೀರಿ ಸತ್ಯವ್ರತನು ಚತುರೂರೂಪಿ ಓಂಕಾರಪುರುಷನನ್ನು ಸಾಕ್ಷಾತ್ಕರಿಸಿಕೊಂಡು ಮೌನಿಯಾಗುತ್ತಾನೆ. ಅಂದರೆ ಅವನ ಮಾತು ಮಂತ್ರವಾಗುತ್ತದೆ; ಕರ್ಮಗಳು ಭಗವತ್ ಸಂಕಲ್ಪಾಭಿವ್ಯಕ್ತಿಗಳಾಗುತ್ತವೆ ; ಭಾವಗಳು ಆನಂದ ಪ್ರೇಮಗಳ ಸಾಗರವಾಗುತ್ತವೆ–ಎಂದೇ ಅರ್ಥ.

"ಚಿತ್ರಿಸಿದೇಕಾಂಗ ನೇತ್ರವನು ತೆರೆಯುವೆನು
ಧ್ವನಿಯಿಲ್ಲದಾನಂದದಾಧಿಕ್ಯವನು. —ರಶ್ಮಿ, I-222.

I open the wide eye of *solitude*
To uncover the *voiceless rapture* of *my bliss.*

—*Savitri,* P. 783

ಇದೆಲ್ಲ ಏತಕ್ಕಾಗಿ? ಪರಮಾತ್ಮನು ಸತ್ಯವ್ರತನಿಗೆ ಹೇಳುತ್ತಾನೆ:

"........ಮರಳು ಧಾರಿಣಿಗಿನ್ನು
ಕ್ಷಿತಿಯುದ್ಯಾನದೊಳೊಂದು ಜ್ಯೋತಿ ಬೀಜವ ಬಿತ್ತು!
ಮಂಗಲಮಯ ಸಮಯ ನಿನ್ನದಾಗುವದು
ನಿನ್ನ 'ಇಂದು'ಗಳು ನಾನೆಚ್ಚ ಜ್ಯೋತಿರ್ಬಾಣ
ನಿನ್ನ 'ನಾಳೆ'ಗಳೆನ್ನ ದಿವ್ಯ ಸಂಕಲ್ಪಗಳು.
ಒಗುಮಿಗುವ ರವಿತೇಜ ನಿನ್ನ ಹಗಲುಗಳು, ಮಗು!
ನಿನ್ನ ರಾತ್ರಿಗಳೆನ್ನ ನಕ್ಷತ್ರಾಗಾರಗಳು........" —'ರಶ್ಮಿ', I-222.

"Earth shall be my work chamber and my house,
My garden of life to plant a seed divine,

× × ×

Thy days shall be my shafts of power and light,
Thy nights my starry mysteries of joy......"

—*Savitri,* P. 784

ಸಾವಿತ್ರಿ ಹಾಗೂ ವೈವಸ್ವತರ ಚತುರೂಪಿ ಓಂಕಾರಪುರುಷನ ದರ್ಶನ ಹಾಗೂ ಸಂಭಾಷಣೆಗಳಲ್ಲಿ ಸಾಮ್ಯವಿದ್ದರೂ ಅವುಗಳ ಉದ್ದೇಶದಲ್ಲಿದ್ದ ಭಿನ್ನತೆಯನ್ನು 'ರಶ್ಮಿ' ಕಾವ್ಯದ ಕವಿ ಟಿಪ್ಪಣಿಗಳಲ್ಲಿ ಸ್ಪಷ್ಟಗೊಳಿಸಿದ್ದಾರೆ.* ವೈವಸ್ವತನು ಸಾವಿತ್ರಿಯಂತೆ ಪೃಥ್ವಿಯನ್ನು ದಿವ್ಯಜೀವನದೆಡೆಗೆ ಒಯ್ಯುದಿದ್ದರೂ "ಕ್ಷಿತಿಯುದ್ಯಾನ-ದೊಳೊಂದು ಜ್ಯೋತಿ ಬೀಜವ ಬಿತ್ತು" ಎಂಬ ಅನುಗ್ರಹ ಆದೇಶವನ್ನು ಪರಾತ್ಪರ

---

* "ಪುಟ 217, 5ನೇ ಸಂಧಿಯಲ್ಲಿ ವೈವಸ್ವತನಿಗೆ ಕಾಣಿಸಿಕೊಂಡ ಚತುರ್ಮುಖ ಪುರುಷ ಹಾಗೂ ಅವನೊಡನಾದ ಸಂವಾದವನ್ನು ಶ್ರೀ ಅರವಿಂದರ 'ಸಾವಿತ್ರಿ' ಮಹಾಕಾವ್ಯದ 11ನೆಯ ಕಾಂಡ (The book of Everlasting Day) ದಿಂದ ಸ್ವತಂತ್ರವಾಗಿ, ತೀರ ಸಂಕ್ಷಿಪ್ತವಾಗಿ ಅಲ್ಲಲ್ಲಿ ಅನುವಾದಿಸಲಾಗಿದೆ. ಆ ಕಾಂಡದ ಉದ್ದೇಶ ಬೇರೆ; ಇಲ್ಲಿ ಈ ಸಂಧಿಯ ಉದ್ದೇಶ ಬೇರೆ. ಅಲ್ಲಿ ಸಾವಿತ್ರಿಗೆ ಪೃಥ್ವಿಯನ್ನು ಮುಂದೆ ದಿವ್ಯಜೀವನದೆಡೆಗೆ ಒಯ್ಯಬೇಕಾಗಿದೆ. ಇಲ್ಲಿ ವೈವಸ್ವತನಿಗೆ ಆನಂದದ ಪರಾತ್ಪರ ಉಗಮವನ್ನು ಕಂಡುಹಿಡಿಯಬೇಕಾಗಿದೆ. ಚತುರ್ಮುಖ ಪುರುಷನ ದರ್ಶನ ಹಾಗೂ ಅನುಭವವೇ ಅಲ್ಲಿಂದ ಕಡತಂದ ಭಾಗವಾಗಿದೆ...."

ರಶ್ಮಿ (ಟಿಪ್ಪಣಿಗಳು), I-550

ನಿಂದ ಪಡೆದಿದ್ದಾನೆ. ಈ ದಿವ್ಯಾದೇಶವು ವೈವಸ್ವತ ಮನುವಿನ ಜೀವಿತದಲ್ಲಿ ಅಭಿವ್ಯಕ್ತವಾದ ಬಗೆಯನ್ನು ಕವಿಗಳೂ ಸುಂದರವಾಗಿ ಸಂಗ್ರಹಿಸಿದ್ದಾರೆ–

> "ತನ್ನ ಹೃದಯ ಪಿಪಾಸೆಯನು ತಣಿಸುವದಕಾಗಿ
> ಕ್ಷೀರಸಾಗರವ ಕಣಸಿನೊಳೀಸುತನುಭವಿಸಿ
> ಆನಂದಿಸಿಹನು ಮನು. ಯುಗಪುರುಷನಾಗುತ್ತ
> ದಿವ್ಯವಾಣಿಯನಾಲಿಸುತ್ತಗ್ನಿದಿವ್ಯಗಳ
> ಎದುರಿಸಿದ. ಸರ್ವಸ್ವವಿರಲು ಯಜ್ಞಾರ್ಪಿತವು.
> ತಾನರಿತ ಆನಂದ ಸರ್ವರ ಸೊತ್ತಿರಲೆಂದ.
> ಪಯಣಿಸಿದ ಜನ್ಮಭೂಮಿಯನು ತೊರೆದು. ಬ್ರಹ್ಮಾವರ್ತ
> ಆಗಿರಲು ಆರ್ಯಾವರ್ತ, ಸಪ್ತಸಿಂಧೂದೇಶ,
> ಮುಂದೊಮ್ಮೆ ಭಾರತವರ್ಷ. —ರಶ್ಮಿ, I–236.

---

# 'ಸೋಷ್ಮನ್' ಮತ್ತು 'ಮಹಾಪ್ರಾಣ'—ಒಂದು ವಿಚಾರ

—ಪ್ರೊ॥ ಪಿ. ಶ್ರೀಕೃಷ್ಣಭಟ್ಟ

ಶಬ್ದಸ್ಮೃತಿಯಲ್ಲಿ ವ್ಯಂಜನಗಳನ್ನು ಮೂವತ್ತಮೂರು ದೇವತೆಗಳಿಗೆ ಹೋಲಿಸಿ ಕೊಟ್ಟಿರುವ ಪದ್ಯ ವಿಚಾರಾರ್ಹವಾಗಿದೆ :

'ಉದ್ಯೋತಿತ ವಿಶ್ವರ್ ಕೃತ
ವಿದ್ಯರ್ ಸೋಷ್ಮಪ್ರತಾಪರಖಿಲಾಂತ ಪದ
ಕ್ಕಾದ್ಯರ್ ವ್ಯಂಜನದಂತನ
ವದ್ಯರ್ ಮೂವತ್ತಮೂವರಾದರ್ ದೇವರ್'
[ಕಾವ್ಯಾವಲೋಕನ—ಶಬ್ದಸ್ಮೃತ್ಯಧಿಕರಣ : ಪದ್ಯ 9]

ಇಲ್ಲಿ ಸಂಖ್ಯೆ ಮತ್ತು ಗುಣದ ದೃಷ್ಟಿಯಿಂದ ದೇವತೆಗಳು ಮತ್ತು ಸಂಖ್ಯೆಗಳಲ್ಲಿ ಸಾದೃಶ್ಯವಿದೆಯೆಂದು ಹೇಳುವಲ್ಲಿ ಬಳಸಿರುವ ವಿಶೇಷಣಗಳು ಅರ್ಥಗರ್ಭಿತವಾಗಿವೆ. ಪದ್ಯವನ್ನು ವ್ಯಂಜನಗಳ ಪರವಾಗಿ ಅರ್ಥೈಸುವಲ್ಲಿ 'ಸೋಷ್ಮಪ್ರತಾಪರ್' ಎಂಬ ವಿಶೇಷಣ ಗಮನಾರ್ಹವಾಗಿದೆ. "ಸೋಷ್ಮ ಎಂದರೆ ಶ, ಷ, ಸ, ಹ ಎಂಬ ಊಷ್ಮವರ್ಣಗಳಿಂದ ಕೂಡಿದವು" ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಿದೆ. (ನೋಡಿ : ಪ್ರಾಚೀನ ಕನ್ನಡ ವ್ಯಾಕರಣಗಳು, ಪು. 67). ಆದರೆ ಇಲ್ಲಿ ಈ ಅರ್ಥ ಸಮುಚಿತವೆನಿಸುವುದಿಲ್ಲ. ಏಕೆಂದರೆ 'ಶ, ಷ, ಸ, ಹ ಗಳಿಂದ ಕೂಡಿದವು' ಎಂಬಲ್ಲಿ ಯಾವೊಂದು ಸ್ವಾರಸ್ಯವೂ ಕಾಣುವುದಿಲ್ಲ. ವಿಚಾರಿಸಿದಾಗ ಇಲ್ಲಿ 'ಸೋಷ್ಮನ್' ಪದದ ಅರ್ಥ ಭಿನ್ನವೂ ವಿಶಿಷ್ಟವೂ ಆಗಿದ್ದು ಒಂದು ವ್ಯಾಕರಣ ಸಂಪ್ರದಾಯದ ಹಿನ್ನೆಲೆಯಲ್ಲಿ ಬಳಕೆಗೊಂಡಂತೆ ಭಾಸವಾಗುತ್ತದೆ.

ಪ್ರಾತಿಶಾಖ್ಯಗಳಲ್ಲಿ (ಋಗ್ವೇದ ಪ್ರಾತಿಶಾಖ್ಯ, 1–13 ; ವಾಜಸನೇಯಿ ಪ್ರಾತಿಶಾಖ್ಯ, 1–54) ವರ್ಗ ದ್ವಿತೀಯ (ಖ, ಛ, ಠ, ಥ, ಫ) ಮತ್ತು ವರ್ಗ ಚತುರ್ಥಗಳಿಗೆ (ಘ, ಝ, ಢ, ಧ, ಭ) 'ಸೋಷ್ಮನ್' (Aspirates) ಎಂಬ ಸಂಜ್ಞೆ ಬಳಕೆಯಾಗಿದೆ. ಅಂತೆಯೆ ಶ, ಷ, ಸ, ಹ ಗಳಿಗೆ 'ಊಷ್ಮನ್'[1] (Spirants) ಎಂಬ ಸಂಜ್ಞೆ ಸಂದಿದೆ. ಉಚ್ಚಾರಣ ವಿಧಾನದಲ್ಲಿ ಇವೆರಡರಲ್ಲಿ ಸ್ಪಷ್ಟವಾದ ಅಂತರವಿದೆ. 'ಸೋಷ್ಮ'ಗಳು 'ಸ್ಪರ್ಶ' ವರ್ಣಗಳು (Contact Consonents), 'ಊಷ್ಮ'ಗಳಾದರೋ 'ಘರ್ಷ'ಗಳು (Fricatives).[2] ಸೋಷ್ಮ ಮತ್ತು ಊಷ್ಮಗಳಲ್ಲಿ ಸಮಾನವಾಗಿರುವ ಅಂಶವೆಂದರೆ ಅವು ಉಚ್ಚಾರದಲ್ಲಿ ಬಳಸುವ ಗಾಳಿಯ ಆಧಿಕ್ಯ, ಮಹಾಪ್ರಾಣತೆ.[3] ಆದರೆ ಪ್ರಾತಿಶಾಖ್ಯಗಳಲ್ಲಾಗಲೀ, ಅಷ್ಟಾಧ್ಯಾಯೀ, ಕಾತಂತ್ರಗಳಲ್ಲಾಗಲೀ 'ಮಹಾಪ್ರಾಣ' ಎಂಬ ಪಾರಿಭಾಷಿಕ ಪದ ಬಳಕೆಗೊಂಡಿಲ್ಲ. 'ಅಲ್ಪಪ್ರಾಣ, ಮಹಾಪ್ರಾಣ' ಎಂಬ ಸಂಜ್ಞೆಗಳು ಸಂಸ್ಕೃತ ವ್ಯಾಕರಣಗಳಲ್ಲಿ

ಮೊದಲ ಬಾರಿಗೆ ಕಾಣಿಸಿಕೊಳ್ಳುವುದು ಪತಂಜಲಿಯ 'ಮಹಾಭಾಷ್ಯ'ದಲ್ಲಾಗಿದೆ (1-1-9). ಕಾಲಾಂತರದಲ್ಲಿ ಸಂಸ್ಕೃತ ವ್ಯಾಕರಣಗಳು ಹನ್ನೊಂದು ವಿಧವಾದ 'ಬಾಹ್ಯಪ್ರಯತ್ನ'ಗಳನ್ನು ಹೇಳುವಲ್ಲಿ 'ಅಲ್ಪಪ್ರಾಣ, ಮಹಾಪ್ರಾಣ' ಎಂಬ ಖಚಿತವಾದ ವಿಂಗಡಣೆ ಮಾಡಿದಂತೆ 'ಸಿದ್ಧಾಂತ ಕೌಮುದಿ'ಯಿಂದ ಸ್ಪಷ್ಟವಾಗುತ್ತದೆ: "ವರ್ಗಾಣಾಂ ಪ್ರಥಮ ತೃತೀಯ ಪಂಚಮಾಃ ಪ್ರಥಮ ತೃತೀಯ ಯಮೌ ಯರಲವಾಶ್ಚಾಲ್ಪಪ್ರಾಣಾಃ । ಅನ್ಯೇ ಮಹಾಪ್ರಾಣಾಃ" (1-12ರ ವೃತ್ತಿ). ಈ ವಿವರಣೆಯಿಂದ ಊಷ್ಮಗಳಿಗೂ ಮಹಾಪ್ರಾಣ ಸಂಜ್ಞೆ ಸಂದಿರುವುದು ಖಚಿತವಾಗುತ್ತದೆ.

ಹಳಗನ್ನಡದ ವ್ಯಾಕರಣ ಗ್ರಂಥಗಳು ಪ್ರಾತಿಶಾಖ್ಯ ಪದ್ಧತಿಗೆ ಸೇರಿದ್ದು ಅವು ಕಾತಂತ್ರಕ್ಕೆ ಬಹಳಷ್ಟು ಋಣಿಗಳೆಂಬುದು ಸರ್ವವಿದಿತ. ಈ ಹಿನ್ನೆಲೆಯಲ್ಲಿ ವಿಚಾರಿಸಿದಾಗ ಶಬ್ದಸ್ಮೃತಿಯ ಮೇಲಿನ ಪದ್ಯದ 'ಸೋಷ್ಮನ್' ಶಬ್ದ ವರ್ಗ ದ್ವಿತೀಯ ಚತುರ್ಥಗಳನ್ನು ಸೂಚಿಸುವ 'ಸಂಜ್ಞೆ'ಯಾಗಿ ಬಳಕೆಗೊಂಡಿರುವಲ್ಲಿ ಹೆಚ್ಚಿನ ಸಂಭಾವ್ಯತೆ ಎದ್ದುತೋರುತ್ತದೆ.

ಕನ್ನಡ ವ್ಯಾಕರಣಗಳು 'ಮಹಾಪ್ರಾಣ' ಎಂಬ ಸಂಜ್ಞೆಯ ಬಳಕೆಯಲ್ಲಿ ತಂದಿರುವ ಮಾರ್ಪಾಟೂ ಇಲ್ಲಿ ಗಮನಾರ್ಹ. ಶಬ್ದಸ್ಮೃತಿ ಮತ್ತು ಶಬ್ದಮಣಿದರ್ಪಣದಲ್ಲಿ 'ಮಹಾಪ್ರಾಣ' ಒಂದು ಸಂಜ್ಞೆಯಾಗಿ ಪ್ರಯುಕ್ತವಾಗಿದೆ. ಶಬ್ದಸ್ಮೃತಿ ಸೂಚ್ಯವಾಗಿಯೂ (ಸೂತ್ರ 6) ಶಬ್ದಮಣಿದರ್ಪಣ ವಾಚ್ಯವಾಗಿಯೂ (ಸೂತ್ರ 24, 25, 265) ವರ್ಗದ್ವಿತೀಯ ಚತುರ್ಥಗಳನ್ನು ಮಾತ್ರ 'ಮಹಾಪ್ರಾಣ'ಗಳೆಂದು ಹೇಳಿವೆ. ಸಂಸ್ಕೃತ ವ್ಯಾಕರಣಗಳು ಈ ಸಂಜ್ಞೆಯ ವ್ಯಾಪ್ತಿಯನ್ನು 'ಊಷ್ಮ'ಗಳಿಗೂ ವಿಸ್ತರಿಸಿದ್ದರೆ ಕನ್ನಡ ವ್ಯಾಕರಣಗಳು ವರ್ಗ ದ್ವಿತೀಯ ಚತುರ್ಥಗಳಿಗಷ್ಟೆ ಸೀಮಿತಗೊಳಿಸಿವೆ. ಹೊಸಗನ್ನಡವಲ್ಲೂ ಸಾಮಾನ್ಯವಾಗಿ ವರ್ಗ ದ್ವಿತೀಯ ಚತುರ್ಥಗಳನ್ನು ಮಾತ್ರ ಮಹಾಪ್ರಾಣಗಳೆಂದು ಗುರುತಿಸುವುದು ರೂಢಿಯಷ್ಟೆ.

'ಕರ್ಣಾಟಕ ಭಾಷಾಭೂಷಣ' ದಲ್ಲಿ 'ಮಹಾಪ್ರಾಣ' ಎಂಬ ಸಂಜ್ಞೆಗೆ ಪ್ರವೇಶ ದೊರಕಿಲ್ಲ. ವರ್ಗ ದ್ವಿತೀಯ ಚತುರ್ಥಗಳು ಸಂಖ್ಯಾನುಕರಣಾದಿಗಳನ್ನು ಬಿಟ್ಟು ಉಳಿದೆಡೆಗಳಲ್ಲಿ ಸಾಧಾರಣವಾಗಿ ಬಳಕೆಗೊಳ್ಳುವುದಿಲ್ಲ ಎನ್ನುವುದು ಅದರ ಅಭಿಮತ (ಸೂತ್ರ11 ಫುತ್ತದರ ವೃತ್ತಿ). ಆದುದರಿಂದ ಭಾಷಾಭೂಷಣವನ್ನು ಆಧಾರವಾಗಿಟ್ಟುಕೊಂಡು "ವರ್ಗದ್ವಿತೀಯ ಚತುರ್ಥಗಳಿಗೆ ಮತ್ತು ಶ ಷ ಕಾರಗಳಿಗೇ ಮಹಾಪ್ರಾಣವೆಂಬ ಸಂಜ್ಞೆ" (ವ್ಯಾಕರಣಗಳು : ಪು. 5ರ ಅಡಿಟಿಪ್ಪಣಿ) ಎಂಬ ತೀರ್ಮಾನಕ್ಕೆಡೆಯಿಲ್ಲ. ಕನ್ನಡ ವ್ಯಾಕರಣಗಳ ಮಟ್ಟಿಗೆ 'ಸೋಷ್ಮನ್' ಮತ್ತು 'ಮಹಾಪ್ರಾಣ' ಇವು ಪರ್ಯಾಯವಾಚಿಗಳಾಗಿವೆ. ಮೇಲೆ ಉಲ್ಲೇಖಿಸಿದ ಪದ್ಯವನ್ನು ರಚಿಸುವಲ್ಲಿ ಕವಿಯ ಕಣ್ಣಮುಂದೆ ದೇವತೆಗಳ 'ಸೋಷ್ಮಪ್ರತಾಪ' (ಉಜ್ವಲ ಪರಾಕ್ರಮ, ಪ್ರಖರ ತೇಜಸ್ಸು) ಮತ್ತು 'ಮಹಾಪ್ರಾಣತೆ' ಸುಳಿದಿರಬೇಕೆಂದು ಭಾಸವಾಗುತ್ತದೆ.

**ಈ ವಿವೇಚನೆಯ ಸಾರಾಂಶವಿಷ್ಟು :**

1. 'ಸೋಷ್ಮನ್' ಎಂಬುದು ವರ್ಣಮಾಲೆಯಲ್ಲಿ ವರ್ಗ ದ್ವಿತೀಯ ಚತುರ್ಥಗಳಿಗೆ ಪ್ರಾತಿ ಶಾಖ್ಯ ಪದ್ಧತಿಯಲ್ಲಿದ್ದ ಒಂದು ಪ್ರಾಚೀನ ಸಂಜ್ಞೆ.

2. 'ಸೋಷ್ಮ'ಕ್ಕೆ ಸಂವಾದಿಯಾಗಿ, ಅದರ ಸ್ಥಾನದಲ್ಲಿ 'ಮಹಾಪ್ರಾಣ'ವನ್ನು ಕನ್ನಡ ವ್ಯಾಕರಣಗಳಲ್ಲಿ ಬಳಸಲಾಗಿದೆ.

3. 'ಮಹಾಪ್ರಾಣ' ಸಂಜ್ಞೆಯ ವ್ಯಾಪ್ತಿ ಕನ್ನಡ ವ್ಯಾಕರಣಗಳಲ್ಲಿ ವರ್ಗ ದ್ವಿತೀಯ ಚತುರ್ಥಗಳಿಗಷ್ಟೇ ಸೀಮಿತವಾಗಿದೆ.

4. ಸೋಷ್ಮ ಮತ್ತು ಊಷ್ಮ ಈಯೆರಡು ಪದಗಳೂ ಪಾರಿಭಾಷಿಕ ಪದಗಳಾಗಿ ಹಳಗನ್ನಡ ವ್ಯಾಕರಣಗಳಲ್ಲಿ ಬಳಕೆಯಾಗಿಲ್ಲ.

## ಪರಾಮರ್ಶನ ಸಾಹಿತ್ಯ


1. ಕಾವ್ಯಾವಲೋಕನಂ : (ಸಂ.) ಆರ್. ನರಸಿಂಹಾಚಾರ್ (1967)
2. ಕರ್ಣಾಟಕ ಭಾಷಾಭೂಷಣಂ : ,, (1975)
3. ಶಬ್ದಮಣಿದರ್ಪಣಂ : (ಸಂ.) ಡಿ. ಎಲ್. ನರಸಿಂಹಾಚಾರ್ (1975)
4. ಪ್ರಾಚೀನ ಕನ್ನಡ ವ್ಯಾಕರಣಗಳು : ಎಂ. ವಿ. ಸೀತಾರಾಮಯ್ಯ (1979)
5. ವ್ಯಾಕರಣಗಳು–[ಕವಿ ಕಾವ್ಯಪರಂಪರೆ] : (ಸಂ.) ವಿ. ಸೀತಾರಾಮಯ್ಯ (1977)
6. ಋಗ್ವೇದ ಪ್ರಾತಿಶಾಖ್ಯಂ : (ಸಂ.) ಸಿದ್ಧೇಶ್ವರ ಭಟ್ಟಾಚಾರ್ಯ (1970)
7. ವಾಜಸನೇಯ ಪ್ರಾತಿಶಾಖ್ಯ : (ಸಂ.) ವಿ. ವೆಂಕಟರಾಮ ಶರ್ಮ (1934)
8. Critical Studies on Katyayana's Suklayajurveda Pratisakhya : *V. Venkatarama Sarma* (1935)


---

1. **ನೋಡಿ :** ಋಗ್ವೇದ ಪ್ರಾತಿಶಾಖ್ಯ 1–10 : ಶ, ಷ, ಸ, ಹ, ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯ—ಈ ಎಂಟನ್ನು 'ಊಷ್ಮನ್' ಎನ್ನಲಾಗಿದೆ.

2. See : (Critical studies on Katyayana's Suklayajurveda Pratisakhya. P : 204, "In the term 'Sosman', aspirated mute ; Usman is to be understood not in this specific sense, but in that of 'rush of air' 'expulsion of unitonated breath' "

3. 'ಪ್ರಾಣ' ಎಂದರೆ ಗಾಳಿ. ಅಧಿಕ ಗಾಳಿಯನ್ನು ಬಳಸಿ ಉಚ್ಚಾರಗೊಳ್ಳುವ ವರ್ಣಗಳಿಗೆ 'ಮಹಾಪ್ರಾಣ'ವೆಂಬ ಸಂಜ್ಞೆ.

# ಪುರಂದರದಾಸರ ಪಿಳ್ಳಾರಿ ಗೀತೆಗಳು: ಒಂದು ಟಿಪ್ಪಣಿ

—ಡಿ. ಶ್ರೀಧರ

ಕೆರೆಯ ನೀರನು ಕೆರೆಗೆ ಚೆಲ್ಲಿ
ವರವ ಪಡೆದವರಂತೆ ಕಾಣಿರೊ ।
ಹರಿಯ ಕರುಣದೊಳಾದ ಭಾಗ್ಯವ
ಹರಿಸಮರ್ಪಣೆ ಮಾಡಿರೊ ।
ಸಿರಿಪುರಂದರ ವಿಠಲರಾಯನ
ಚರಣಕಮಲವ ನಂಬಿ ಬದುಕಿರೋ ॥

ಎಂಬ ಈ ಹಾಡು ಉಗಾಭೋಗ ಎಂದು, ಪುರಂದರ ದಾಸರ ಸಾಹಿತ್ಯ – 3, ಪುಟ 195, ಅಖಿಲ ಕರ್ನಾಟಕ ಶ್ರೀ ಪುರಂದರದಾಸರ 400ನೇ ವರ್ಷದ ಉತ್ಸವ ಮಂಡಳ, ಧಾರವಾಡ, 1965, ಸಂ : ಶ್ರೀ ಬೆಟಗೆರೆ ಕೃಷ್ಣಶರ್ಮ, ಶ್ರೀ ಬೆಂಗೇರಿ ಹುಚ್ಚರಾಯರು—ಈ ಪುಸ್ತಕದಲ್ಲಿ ಇದೆ. ಸಂಗೀತ ಶಾಸ್ತ್ರ ಸರಸ್ವತಿ, ಸಂಗೀತ ಸುಧಾಕರ, ಡಾ॥ ರಾ. ಸತ್ಯನಾರಾಯಣ ಅವರು 'ಕರ್ಣಾಟಕ ಸಂಗೀತ ವಾಹಿನಿ', 1980, ಪ್ರಕಾಶಕರು : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ — ಈ ಪುಸ್ತಕದಲ್ಲಿ (ಪು. 270-77) ಹೀಗೆ ಬರೆಯುತ್ತಾರೆ : "'ಲಂಬೋದರ', (ವಾಸ್ತವಿಕವಾಗಿ ಶ್ರೀ ಗಣನಾಥ ಎಂದು ಪ್ರಾರಂಭವಾಗುವ ಈ ಗೀತೆಯನ್ನು 'ಲಂಬೋದರ ಲಕುಮಿಕರ' ಎಂದು ಮೊದಲು ಮಾಡುವ ಸಂಪ್ರದಾಯ ಇಂದು ಸಾರ್ವತ್ರಿಕವಾಗಿದೆ) 'ಕುಂದಗೌರ', 'ಕೆರೆಯ ನೀರನು' ಎಂಬ ಮೂರು ಗೀತಗಳಲ್ಲಿ ವಾಗ್ಗೇಯಕಾರನ ಅಂಕಿತವಿಲ್ಲ ; ಆದರೂ ಇವು ಪುರಂದರದಾಸ ಕೃತ ಎಂಬುದಕ್ಕೆ ಪ್ರಬಲವಾದ ಪರಂಪರಾನುಗತವಾದ ನಂಬುಗೆಯೂ ಸ್ವಲ್ಪ ಸಾಕ್ಷ್ಯವೂ ಇದೆ. ಆದರೆ 'ಪದುಮನಾಭ' ಎಂಬ ಗೀತೆಯು ಅವರದಲ್ಲ." 'ಕೆರೆಯ ನೀರನು ಕೆರೆಗೆ ಚೆಲ್ಲಿ' ಎಂಬ ಗೀತವು ಮೂಲತಃ ಪಿಳ್ಳಾರಿ ಗೀತೆಯಾಗಿದ್ದ ಹಾಗೆ ಕಾಣುವುದಿಲ್ಲ. ಏಕೆಂದರೆ ಇದು ಪುರಂದರ ದಾಸರು ಮಲಹರಿ ರಾಗದಲ್ಲಿ[1] ರಚಿಸಿರುವ ಒಂದು ಸುಳಾದಿಯ ನುಡಿಯಾಗಿರುವುದು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಕೆ. 570[2] ಎಂಬ ಹಸ್ತಪ್ರತಿಯಿಂದ ತಿಳಿದುಬರುತ್ತದೆ. ಗ್ರಂಥಸಂದರ್ಭದಿಂದ ಈ ಖಂಡವು ಈ ಸುಳಾದಿಯ ಅವಿಭಾಜ್ಯ ಅಂಗವಾಗಿದೆಯೆಂಬುದು ಸ್ಪಷ್ಟವಾಗಿದೆ. ಇದನ್ನೂ ಮೇಲ್ಕಂಡ ನಾಲ್ಕು ಗೀತೆಗಳನ್ನೂ ('ಶ್ರೀಗಣನಾಥ', 'ಕುಂದಗೌರ', 'ಕೆರೆಯ ನೀರನು', 'ಪದುಮನಾಭ') ಕಲೆ ಹಾಕಿ, ಒಂದೇ ಪ್ರಬಂಧವೆಂದು ಪರಿಗಣಿಸಿರುವ ಪರಂಪರೆಯನ್ನು ಗಮನಿಸಿದರೆ ಪಿಳ್ಳಾರಿ ಗೀತೆಗಳಿಗೂ ಸುಳಾದಿಗಳಿಗೂ ಇರುವ ನಿಕಟ ಸಂಬಂಧವು ಸುಸ್ಪಷ್ಟವಾಗುತ್ತದೆ. ಈ ನಾಲ್ಕು ಗೀತೆಗಳು ಮಲಹರಿ

ರಾಗ[1]ದಲ್ಲಿಯೇ, ಆದರೆ ಬೇರೆ ಬೇರೆ ತಾಳಗಳಲ್ಲಿ ಇರುವುದನ್ನು ನೋಡಿದಾಗ, ಪ್ರಾರಂಭದಲ್ಲಿ ಇವುಗಳನ್ನು ಸಮಷ್ಟಿಯಲ್ಲಿ ಒಂದು ಸುಳಾದಿಯೆಂದೇ–ಎಂದರೆ ಗೀತವೆಂದೇ ಭಾವಿಸಿಕೊಳ್ಳಲಾಗಿದ್ದು 18ನೇ ಶತಮಾನದ ವೇಳೆಗೆ ಇದರ ಖಂಡಗಳು ಸ್ವತಂತ್ರ ಸ್ಥಾನಮಾನಗಳನ್ನು ಪಡೆದು ಗೀತಗಳೆಂಬ ಹೆಸರಿನಿಂದಿರಬಹುದೆಂಬುದು ಸಂಭಾವ್ಯವಾಗಿದೆ. ಪುರಂದರದಾಸರೇ ಅಭ್ಯಾಸಗಾನವನ್ನು ವ್ಯವಸ್ಥೆಗೊಳಿಸಿದರೆ ? ಮೈಸೂರಿನ ಶ್ರೀ ವರಲಕ್ಷ್ಮೀ ಅಕಾಡೆಮಿಯ ಹಸ್ತಪ್ರತಿ ಗ್ರಂಥ ಭಂಡಾರದಲ್ಲಿ "ಬೆಂಗೇರಿ ಹಸ್ತಪ್ರತಿ" ಎಂಬ ಹೆಸರಿನ ಓಲೆಗರಿಯ ಪುಸ್ತಕವೊಂದಿದೆ ; ಅದು ಕಡೆಯ ಪಕ್ಷ 200 ವರ್ಷಗಳಷ್ಟಾದರೂ ಹಳೆಯದು. ತುಳಜನು 'ಸಂಗೀತ ಸಾರಾಮೃತ'ದ ರಾಗವಿವೇಕ ಪ್ರಕರಣದಲ್ಲಿ ಮಲಹರಿ ರಾಗದ ಲಕ್ಷಣವನ್ನು ನಿರೂಪಿಸುವಾಗ 'ವಿರೂಪಾಕ್ಷ ಕರುಣಾಕರ' ಎಂಬ ಇದರ ಅಂಶವನ್ನೂ 'ಧರಿರಿಸಧಪಧಪಮಗರಿಸ' ಎಂಬ ಧಾತುಖಂಡದೊಡನೆಯೇ ಲಕ್ಷ್ಯೋದಾಹರಣೆಯಾಗಿ ಕೊಟ್ಟಿದ್ದಾನೆ. ಪುರಂದರದಾಸರು (ಅಥವಾ ಅನಂತರದ ಹರಿದಾಸರು) ಭಾಂಡೀರ ಭಾಷೆಯಲ್ಲಿಯೂ ಕೃತಿ ರಚನೆ ಮಾಡಿದ್ದರು. ಉದಾ: 'ಆನಲೇಕರ', 'ಭಯಸಮಯದೇವ[2]. "ಭಯ ಸಮಯದೇವ, ಉನಿದೇವ, ಶ್ರೀ ವೆಂಕಟಾಚಲದೇವನಲರೆ ಶ್ರೀ ಪುರಂದರವಿಠಲ ರಾಯ ಶ್ರೀ ವೆಂಕಟಾಚಲದೇವನಲರೆ ಕೇರಳ ಮಣಿ ದಣಿಸುವರೆ" ಎಂಬುದು ಇದರ ಮಾತು. ಇದರಲ್ಲಿನ 'ದಣಿಸುವರೆ' ಎಂಬ ದೈನ್ಯಭಾವದ ಪ್ರಶ್ನೆಯು ಕನ್ನಡದಲ್ಲಿದೆಯಷ್ಟೆ. ಇದು ಏನೆ ಇರಲಿ, ಪಿಳ್ಳಾರಿ ಗೀತೆಗಳು ಹರಿದಾಸ ಕೃತಗಳೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಪಿಳ್ಳಾರಿ ಗೀತೆಗಳು ('ಶ್ರೀ ಗಣನಾಥ', 'ಕುಂದಗೌರ', 'ಕೆರೆಯ ನೀರನು', 'ಪದುಮನಾಭ'), 'ಅನಲೇಕರ' ಮತ್ತು 'ಭಯಸಮಯದೇವ'—ಇವುಗಳ ರಚನೆಯನ್ನೂ ಗಮನಿಸಿದಾಗ, ಇವು ಯಥಾಕ್ಷರ ಪ್ರಬಂಧಗಳು ; ಎಂದರೆ, ' ಮಾತುವಿನ ಪ್ರತಿಯೊಂದು ಅಕ್ಷರಕ್ಕೂ ಒಂದೇ ಸ್ವರ. ಈ ಸ್ವರವು ಆಯಾ ಅಕ್ಷರದಷ್ಟೇ ಕಾಲಪ್ರಮಾಣವನ್ನುಳ್ಳದ್ದು, ಎಂಬ ಸ್ವಾರಸ್ಯಗಳು ಹೊರಪಡುತ್ತವೆ.

ಹಾಗಾದರೆ 'ಕೆರೆಯ ನೀರನು' ಹಾಡಿಗೆ ಏಕೆ ಪುರಂದರದಾಸರ ಅಂಕಿತವಿಲ್ಲ–

---

1. ಕೆ. 570 ಹಸ್ತಪ್ರತಿಯಲ್ಲಿ 'ಮಲಹರಿ' ರಾಗ ಎಂದಿದೆ. ಮಹಾತ್ಮ್ಯಜ್ಞಾನದಲ್ಲಿ 'ಮಾಯಾಮಾಳವಗೌಳ' ಎಂದಿದೆ.

ಮಲಹರಿ :— ಸ ರಿ ಮ ಪ ದ ಸ಼
1 1 1
ಸ ದ ಪ ಮ ಗ ರಿ ಸ
1 1 3 2

ಮಾಯಾಮಾಳವಗೌಳ :— ಸ ರಿ ಗ ಮ ಪ ದ ನಿ ಸ
1 3 1 1 3

ಹೀಗೆ ಇವೆರಡು ಬೇರೆ ಬೇರೆ ರಾಗಗಳು.

2. ಕೆ. 570 ಹಸ್ತಪ್ರತಿ (ನೋಡಿ: ಸಂಪುಟ 1, ಪುಟ 133–4. ಕನ್ನಡ

ಬೆಂಗೇರಿ ಹಸ್ತಪ್ರತಿಯಲ್ಲಿ ? ಈ ಹಾಡಿನ ಮೂಲ ಸುಳಾದಿಯಲ್ಲಿ ಪುರಂದರ ವಿಠಲ ಅಂಕಿತ ಇದೆಯೆ ? ಆ ಮೂಲ ಸುಳಾದಿ ಯಾವುದು? 'ಸಿರಿಪುರಂದರ ವಿಠಲರಾಯನ' ಮೂಲ ಸುಳಾದಿಯಲ್ಲಿದ್ದು (ಇದೆಯೇ ?) ಅದನ್ನು 'ಕೆರೆಯ ನೀರನು' ಹಾಡಿಗೆ ಸೇರಿಸಿದ್ದಾರೆಯೇ ? ಮಿಕ್ಕ ಮೂರು ಗೀತೆಗಳಿಗೆ ಯಾಕೆ ಪುರಂದರ ವಿಠಲ ಸೇರಿಸಿಲ್ಲ ? ಹೀಗಾಗಿ ಪಿಳ್ಳಾರಿ ಗೀತೆಗಳು ಹರಿದಾಸಕೃತ ಎಂಬುದರ ಬಗ್ಗೆ ಸಂದೇಹ ಬರುತ್ತದೆ. ಅಥವಾ ಇವು ಅಂಕಿತವಿಲ್ಲದೆ ರಚಿತವಾದ ಪುರಂದರದಾಸರ ಹಾಡುಗಳೇ ? ಈ ಎಲ್ಲ ಹಾಡುಗಳ (ಅಭಿನವ ಪುರಂದರವಿಠಲ ರಚಿತ 'ಪದುಮನಾಭ' ಉಳಿದು)—ಶ್ರೀ

---

ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು ; 1962) :

'ಆಯತ ಸುಳಾದಿಗಳು' : ಇದು ಒಂದು ಅಮೂಲ್ಯ ಕೃತಿ. ಪ್ರತಿಯೊಂದು ಸುಳಾದಿಗೂ ರಾಗಸಮೇತ ಸ್ವರಪ್ರಸ್ತಾರ ಇದೆ.

ಈ ಹಸ್ತಪ್ರತಿಯ ವಿಚಾರವಾಗಿ ಡಾ|| ರಾ. ಸತ್ಯನಾರಾಯಣ ಹೀಗೆ ಹೇಳಿದ್ದಾರೆ : "Yet another is a palmleaf manuscript in Oriental Research Institute, Mysore. This is shown in the Institute's descriptive catalogue of Kannada Manuscripts as K. 570. The manuscript has been called *Ayatha Suladigalu.* This manuscript gives in its first half, alapana in notation in all its stages such as *ayata, sthayi* etc., for some sixty ragas in a tradition which is at least 250 to 300 years old. The *Lakshyas* and *melas* for the ragas are given in the first half of the manuscript." (ಶ್ರೀ ಪುರಂದರ ದಾಸರ ಸಾಹಿತ್ಯ-4 : 'ಕೃಷ್ಣಲೀಲಾ'; Introduction : The *Suladis* and *Ugabhogas* of Karnataka Music, P. 76-77.)

3. ಶ್ರೀ ಗಣನಾಥ, ಕುಂದಗೌರ, ಕೆರೆಯ ನೀರನು, ಪದುಮನಾಭ—ಇವು ಮಲಹರಿ ರಾಗದಲ್ಲಿ, ಚತುರಶ್ರ ರೂಪಕ, ತಿಶ್ರತ್ರಿಪುಟ ತಾಳಗಳಲ್ಲಿವೆ. 'ಆನಲೇಕರ' ಶುದ್ಧಸಾವೇರಿ ರಾಗದಲ್ಲಿ ತಿಶ್ರತ್ರಿಪುಟ ತಾಳದಲ್ಲಿದೆ.

ಮೂಲರಾಗದ ಸ್ವರೂಪ : ಸ ರಿ ಮ ಪ ದ ಸ ;
1 1 1

ಈಗಿರುವ ರಾಗದ ಸ್ವರೂಪ : ಸ ರಿ ಮ ಪ ದ ಸ
2 1 2

'ಭವಸಮುಯದೇವ' ದೇಶಾಕ್ಷಿ ರಾಗದಲ್ಲಿ ತಿಶ್ರತ್ರಿಪುಟ ತಾಳದಲ್ಲಿದೆ.

"ವಿಜಯದಾಸರಿಂದಲೇ 1687-1755 ಪುರಂದರದಾಸರ ಪವಾಡಕಥೆ ಪರಂಪರೆ ಹುಟ್ಟಿ ಮುಂದೆ ಬೆಳೆಯುತ್ತ ನಡೆದಂತೆ ಕಾಣುತ್ತದೆ." ಪು. 39.

"ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಪುರಂದರದಾಸರ ಅನುಯಾಯಿ ವರ್ಗವೇ ಅವರ

ಗಣನಾಥ, ಕುಂದಗೌರ, ಕೆರೆಯ ನೀರನು, ಆನಲೇಕರ ಮತ್ತು ಭಯಸಮಯದೇವ —ಗೇಯಭಾಗವೇ ಈ 20ನೆಯ ಶತಮಾನದಲ್ಲಿಯೂ ಸಹ ಉಳಿದಿರುವ ಪುರಂದರ ದಾಸರ ಏಕೈಕ ಹಾಗೂ ರುಜುವಾತುಳ್ಳ ನಿರ್ದಿಷ್ಟ ಸಂಗೀತದ ರಚನೆ.

---

ವಾಸ್ತವ ಜೀವನಚರಿತ್ರೆಯು ವಿಶದವಾಗಿ ನಮಗೆ ತಿಳಿಯದಂತೆ ಮಾಡಿಬಿಟ್ಟಿದೆ.'' (ಪು. 88 ; ಸಂಪಾದಕರ ಮಾತುಗಳು, ಸಂಕೀರ್ಣ ಸಂಗ್ರಹ ; ಪುರಂದರದಾಸರ ಸಾಹಿತ್ಯ-6 ; ಧಾರವಾಡ.)

# ಕನ್ನಡ ಚಿತ್ರಕಾವ್ಯ*

ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ ಅವರ 'ಕನ್ನಡ ಚಿತ್ರಕಾವ್ಯ' ಎಂಬುದು ಚಿತ್ರಕಾವ್ಯದ ಉಗಮ, ಸ್ವರೂಪ, ವಿಕಾಸ, ಇತಿಹಾಸ ಮತ್ತು ವಿಮರ್ಶೆಗಳನ್ನು ಒಳಗೊಂಡ 540 ಪುಟಗಳ ಮಹಾಗ್ರಂಥ. ಸಂಸ್ಕೃತ ಸಾಹಿತ್ಯದಲ್ಲಿ ಹಾಗೂ ಅದರ ಪ್ರಭಾವಕ್ಕೆ ಒಳಗಾದ ಪ್ರಾಚೀನ ಭಾರತೀಯ ಭಾಷಾ ಸಾಹಿತ್ಯದಲ್ಲಿ ಚಿತ್ರಕಾವ್ಯದ ರಚನೆಯು ಸಹೃದಯರಂಜನೆಯ, ಪಾಂಡಿತ್ಯಪ್ರದರ್ಶನದ, ಕಾವ್ಯಗೌರವವನ್ನು ಹೆಚ್ಚಿಸುವ, ಮಹತ್ವದ ಒಂದು ಅಂಗವಾಗಿತ್ತು. ಆರಂಭದ ಮಹಾಕವಿಗಳು ತಮ್ಮ ಕೃತಿಗಳಲ್ಲಿ ಸ್ವಲ್ಪಭಾಗವನ್ನು ಚಿತ್ರಭೇದಗಳಿಗೆ ಮೀಸಲಾಗಿಡುತ್ತಿದ್ದರೆ, ತರುವಾಯದ ಕವಿಗಳಲ್ಲಿ ಕೆಲವರು ಸ್ವತಂತ್ರವಾದ ಚಿತ್ರಕಾವ್ಯಗಳನ್ನೇ ರಚಿಸಿ, ಸಹೃದಯರ ಸಂತೋಷವನ್ನು ಹೆಚ್ಚಿಸಿದರು. ಅದರಲ್ಲಿ ಬೇಕಾದ ಹಾಗೆ ಭೇದೋಪಭೇದಗಳು ಹುಟ್ಟಿಕೊಂಡುವು. ಭಾರವಿ, ಭಟ್ಟಿ ಮೊದಲಾದ ಸಂಸ್ಕೃತಕವಿಗಳ ಕಾಲಕ್ಕೇ ಮನ್ನಣೆಯನ್ನು ಪಡೆದ ಈ ಚಿತ್ರಕಾವ್ಯವು ಮುಂದೆ ಕುಮಾರದಾಸ ಮೊದಲಾದವರ ಕೃತಿಗಳ ಮೂಲಕ ಹೆಚ್ಚಿನ ಪ್ರಚಾರಕ್ಕೆ ಬಂದಿತು. ಮಾಘ, ಹರಿಚಂದ್ರ, ರತ್ನಾಕರ, ಶಿವಸ್ವಾಮಿ, ಮಂಖ, ಧನಂಜಯ, ಕವಿರಾಜ, ವೇದಾಂತದೇಶಿಕ, ವಾಸುದೇವ, ರಾಮಚಂದ್ರ, ಚಿದಂಬರ, ಮೇಘವಿಜಯಗಣಿ, ವೆಂಕಟಾಧ್ವರಿ, ಹರದತ್ತಸೂರಿ ಮುಂತಾದ ಕವಿಗಳ ಕಾಲದಲ್ಲಂತೂ ಅದು ವಿಶೇಷವಾಗಿ ವಿಜೃಂಭಿಸಿತು. ಸಂಸ್ಕೃತ ಲಾಕ್ಷಣಿಕರೂ ಸಹ ಕಾಲದಿಂದ ಕಾಲಕ್ಕೆ ತಮ್ಮ ಕೃತಿಗಳ ಮೂಲಕ ಅದರ ಶಾಸ್ತ್ರೀಯ ಚೌಕಟ್ಟನ್ನು ನಿರ್ಣಯಿಸುವ ಕಾರ್ಯವನ್ನು ನಡೆಸಿದರು.

ಸಂಸ್ಕೃತ ಲಾಕ್ಷಣಿಕರನ್ನು ಅನುಸರಿಸಿ ಕನ್ನಡ ಲಾಕ್ಷಣಿಕರಾದ ಶ್ರೀವಿಜಯ, ನಾಗವರ್ಮ, ಉದಯಾದಿತ್ಯ, ಮಾಧವ, ತಿರುಮಲಾರ್ಯ, ಲಿಂಗರಾಜ ಮೊದಲಾದವರು ಚಿತ್ರಕಾವ್ಯದ ಸ್ವರೂಪ–ಪ್ರಭೇದಾದಿಗಳನ್ನು ಲಕ್ಷಣ–ಲಕ್ಷ್ಯ ಸಹಿತವಾಗಿ ನಿರೂಪಿಸಿದರು. ಪಂಪ, ರನ್ನ, ನಾಗಚಂದ್ರ, ಆಗ್ಗಳ, ಆಚಣ್ಣ, ನೇಮಿಚಂದ್ರ, ಗುರುಲಿಂಗವಿಭು, ಷಡಕ್ಷರಿ, ಚೇರಮಾಂಕ ಮೊದಲಾದ ಕವಿಗಳು ತಮ್ಮ ಕಾವ್ಯಗಳಲ್ಲಿ ಚಿತ್ರಕಾವ್ಯಕ್ಕೆ ಕೊಂಚ ಸ್ಥಾನ ಕೊಟ್ಟರು.

ಇವೆಲ್ಲದರ ಹಿನ್ನೆಲೆಯಲ್ಲಿ ಡಾ॥ ಶಾಸ್ತ್ರಿಗಳು ತಮ್ಮ ಕೃತಿಯಲ್ಲಿ ಚಿತ್ರಕಾವ್ಯದ ಸಮಗ್ರವಾದ ಅಧ್ಯಯನ ನಡೆಸಿದ್ದಾರೆ. ಪೀಠಿಕೆ, ಅನುಪ್ರಾಸ–ಯಮಕ, ವರ್ಣಚಿತ್ರ, ಶ್ಲೇಷಚಿತ್ರ–ಗರ್ಭಕವಿತ್ವ, ಗೂಢಚಿತ್ರ, ಪ್ರಹೇಳಿಕೆ, ಗತಿಚಿತ್ರ, ಬಂಧಚಿತ್ರ,

---

* ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೭, ಪು. ೫೪೦, ಬೆಲೆ ರೂ. 100.

ಒಟ್ಟುನೋಟ ಎಂಬ ಒಂಬತ್ತು ಅಧ್ಯಾಯಗಳಲ್ಲಿ ಎಲ್ಲ ವಿಷಯಗಳನ್ನೂ ಪರಿಷ್ಕಾರವಾಗಿ ಮಂಡಿಸಿದ್ದಾರೆ. ಒಂದೊಂದೂ ವಿಷಯವನ್ನು ಅವರು ಹೇಗೆ ನಿರ್ವಹಿಸಿದ್ದಾರೆಂಬುದಕ್ಕೆ 'ವರ್ಣಚಿತ್ರ' ಎಂಬೊಂದು ಅಧ್ಯಾಯವನ್ನು ನೋಡೋಣ : ವರ್ಣಚಿತ್ರಗಳಲ್ಲಿ ಮುಖ್ಯವಾಗಿ ವ್ಯಂಜನವರ್ಣಚಿತ್ರಗಳು, ಸ್ಥಾನಚಿತ್ರಗಳು ಮತ್ತು ಸ್ವರಚಿತ್ರಗಳು ಎಂಬ ಮೂರು ಪ್ರಭೇದಗಳಿವೆ. ವ್ಯಂಜನಚಿತ್ರಗಳನ್ನು ಮೊದಲು ಕೈಗೆತ್ತಿಕೊಂಡಿರುವ ಅವರು ಆರಂಭದಲ್ಲಿ ಸಂಸ್ಕೃತದಲ್ಲಿ ವ್ಯಂಜನಚಿತ್ರಗಳ ಸ್ವರೂಪವೇನೆಂಬುದನ್ನು ವಿಶ್ಲೇಷಿಸಿದ್ದಾರೆ. ದಂಡಿ, ಭೋಜರ ಲಕ್ಷ್ಯಗಳನ್ನು ಅನುಸರಿಸಿ ವ್ಯಂಜನವರ್ಣಚಿತ್ರದ ಸಾಮಾನ್ಯಲಕ್ಷಣವೇನೆಂಬುದನ್ನು ನಿರೂಪಿಸಿದ್ದಾರೆ. ಅದರ ಪ್ರಭೇದಗಳಾದ ಚತುರಕ್ಷರ, ತ್ರ್ಯಕ್ಷರ, ದ್ವ್ಯಕ್ಷರ, ಏಕಾಕ್ಷರಗಳ ಲಕ್ಷಣವನ್ನು ವಿವರಿಸಿ ಶಿಶುಪಾಲವಧ, ಕಿರಾತಾರ್ಜುನೀಯ, ಧರ್ಮಶರ್ಮಾಭ್ಯುದಯ, ಹರವಿಜಯ, ನರನಾರಾಯಣಾನಂದಕಾವ್ಯಗಳಿಂದ ಲಕ್ಷ್ಯಗಳನ್ನು ಎತ್ತಿಕೊಟ್ಟಿದ್ದಾರೆ. ತರುವಾಯ ಅಸಂಯೋಗ, ಕ್ರಮಸ್ಥಪರಿಮಿತವ್ಯಂಜನ, ಸಪ್ತವ್ಯಂಜನಬಂಧ, ದಶವ್ಯಂಜನಬಂಧ, ಅಪಂಚವರ್ಗ, ಅಂತಃಸ್ಥಾಕ್ಷರ, ಅತ್ರಿವರ್ಗ ಮುಂತಾದ ವಿಶೇಷ ವರ್ಣಚಿತ್ರಗಳನ್ನು ಹೇಳಿ ಅವುಗಳಿಗೆ ಕಪ್ಪಿಣಾಭ್ಯುದಯ ಮೊದಲಾದ ಕಾವ್ಯಗಳಿಂದ ಲಕ್ಷ್ಯಗಳನ್ನು ಆರಿಸಿ ಕೊಟ್ಟಿದ್ದಾರೆ.

ಇಷ್ಟೆಲ್ಲ ಆದಮೇಲೆ ಕನ್ನಡದಲ್ಲಿ ವ್ಯಂಜನಚಿತ್ರದ ವ್ಯವಸಾಯ ಹೇಗೆ ನಡೆದಿದೆ ಎಂಬುದರತ್ತ ಗಮನ ಹರಿಸಿದ್ದಾರೆ. ಕವಿರಾಜಮಾರ್ಗ, ಕಾವ್ಯಾವಲೋಕನಗಳಲ್ಲಿ ಅದು ನಿರೂಪಿತವಾಗಿರುವ ಬಗೆಯನ್ನು ಹೇಳುತ್ತಾ, ಅಲ್ಲಲ್ಲಿ ಸಂಸ್ಕೃತ ವ್ಯಂಜನಚಿತ್ರಗಳೊಂದಿಗೆ ತುಲನೆ ಮಾಡಿದ್ದಾರೆ. ತರುವಾಯ ಚಂದ್ರರಾಜನ ಮದನತಿಲಕ, ಆಚಣ್ಣನ ವರ್ಧಮಾನಪುರಾಣ, ಪಿ. ಬಸವಣ್ಣನವರ ನಿರೀಕ್ಷೆ, ಇಮ್ಮಡಿ ಮುರಿಗಾ ಗುರುಸಿದ್ಧನ ಶಿವಲಿಂಗಪಟ್ಟದಿ, ಜಾಯೇಂದ್ರನ ಕನ್ನಡ ಕುವಲಯಾನಂದ, ಚೇರಮಾಂಕನ ಚೇರಮಕಾವ್ಯ, ಮುಖಬೋಳು ಸಿದ್ಧರಾಮನ ಷಟ್ಸ್ಥಲತಿಲಕ, ಸಿದ್ಧನಂಜೇಶನ ರಾಘವಾಂಕ ಚಾರಿತ್ರ, ನೀಲಕಂಠಾಚಾರ್ಯನ ಆರಾಧ್ಯ ಚಾರಿತ್ರ್ಯ, ಸೋಸಲೆ ರೇವಣಾಚಾರ್ಯನ ಮಹಿಮ್ನಸ್ತವಟೀಕೆ, ಬಸವಕವಿಯ ಸಿದ್ಧಲಿಂಗ ಕಾವ್ಯ, ಲಕ್ಷ್ಮೀಶನ ಜೈಮಿನಿ ಭಾರತ. ಪೊನ್ನನ ಜಿನಾಕ್ಷರ ಮಾಲೆ, ಚಿಕುಪಾಧ್ಯಾಯನ ಅಕ್ಷರ ಮಾಲಿಕಾಸಾಂಗತ್ಯಗಳಿಂದ ಲಕ್ಷ್ಯಗಳನ್ನು ಆಯ್ದು ಕೊಟ್ಟಿದ್ದಾರೆ. ತರುವಾಯ ಕ್ರಮವಾಗಿ ಸ್ಥಾನಚಿತ್ರಗಳನ್ನೂ ಸ್ವರಚಿತ್ರಗಳನ್ನೂ ಇದೇ ಬಗೆಯಲ್ಲಿ ವಿವೇಚಿಸಿದ್ದಾರೆ.

ಡಾ॥ ಶಾಸ್ತ್ರಿಗಳ ಈ ವಿವೇಚನೆಯಲ್ಲಿ ಅವರೇ ರೂಪಿಸಿಕೊಂಡಿರುವ ವಿಶಿಷ್ಟವಾದೊಂದು ವ್ಯವಸ್ಥೆಯಿದೆ. ಅದು ಅತ್ಯಂತ ಶಾಸ್ತ್ರೀಯವೂ ನೇರವೂ ಖಚಿತವೂ ನಿರ್ದುಷ್ಟವೂ ಆಗಿದೆ. ಸಂದೇಹಕ್ಕಾಗಲಿ, ಅಸ್ಫುಟತೆಗಾಗಲಿ ಎಲ್ಲಿಯೂ ಎಡೆಯಿಲ್ಲ. ಆವಶ್ಯಕವಿರುವೆಡೆಗಳಲ್ಲಿ ಲಕ್ಷ್ಯಪದ್ಯಗಳನ್ನು ಹೊಸಗನ್ನಡಕ್ಕೆ ಮೂಲಶೈಲಿಗೆ ನಿಷ್ಠ

ರಾಗಿ ಅನುವಾದಿಸಿ ಕೊಟ್ಟು ಲಕ್ಷಣ-ಲಕ್ಷ್ಯ ಸಮನ್ವಯ ಮಾಡಿದ್ದಾರೆ. ಅವರು ಪರಿಶೀಲಿಸಿರುವ ಗ್ರಂಥಗಳು ಹಾಗೂ ನೀಡಿರುವ ಲಕ್ಷ್ಯಗಳ ವ್ಯಾಪ್ತಿಯನ್ನು ನೋಡಿದರೆ ನಾವು ಮಂತ್ರಮುಗ್ಧರಾಗುತ್ತೇವೆ. ಅವರ ವಿಷಯ ಸಂಗ್ರಹಣೆ ಎಷ್ಟು ದೀರ್ಘಕಾಲ ಹಿಡಿದಿದೆ, ಅವರ ಚಿಂತನಮಂಥನಗಳು ಎಷ್ಟು ಆಳವಾಗಿ ನಡೆದಿದೆ, ಅವರ ವಿಮರ್ಶನಪ್ರಜ್ಞೆ ಎಷ್ಟು ಸಂಯಮದಿಂದ ಕೆಲಸ ಮಾಡಿದೆ ಎಂಬ ಸಂಗತಿಗಳು ಮೇಲಿಂದ ಮೇಲೆ ನಮ್ಮನ್ನು ಆನಂದಾಶ್ಚರ್ಯಗಳಲ್ಲಿ ಮುಳುಗಿಸುತ್ತವೆ.

ಚಿತ್ರಕಾವ್ಯದ ಭೇದೋಪಭೇದಗಳ ಸ್ವರೂಪ ವಿವೇಚನೆ ಅಷ್ಟು ಸುಲಭದ ಕೆಲಸವಲ್ಲ. ಅದರಲ್ಲಿ ಅನೇಕ ತೊಡಕುಗಳಿವೆ. ಹಳೆಯ ಸಾಹಿತ್ಯದ ಒಂದಿಷ್ಟು ಭಾಗ ಇನ್ನೂ ಬೆಳಕು ಕಾಣದೆ ಉಳಿದಿದೆ. ಬೆಳಕು ಕಂಡಿರುವ ಸಾಹಿತ್ಯದಲ್ಲಿ ಅಡಕವಾಗಿರುವ ಚಿತ್ರಕಾವ್ಯದ ಮಾದರಿಗಳ ಕ್ರೋಡೀಕರಣವೇನೂ ನಡೆದಿಲ್ಲ. ಕ್ರೋಡೀಕೃತವಾಗಿರುವಷ್ಟು ಚಿತ್ರಕಾವ್ಯದ ವಿವರಗಳಲ್ಲಿ ಸಾಕಷ್ಟು ಅರ್ಥಕ್ಲೇಶಗಳೂ ಪಾಠಕ್ಲೇಶಗಳೂ ತುಂಬಿವೆ. ಇಷ್ಟೆಲ್ಲ ಸಮಸ್ಯೆಗಳ ನಡುವೆಯೂ ಡಾ॥ ಶಾಸ್ತ್ರಿಗಳು ತಮ್ಮ ಪಯಣವನ್ನು ಮುಂದುವರಿಸಿ ಚಿತ್ರಕಾವ್ಯದ ಪಥವನ್ನು ಸಾಕಷ್ಟು ಪ್ರಶಸ್ತಗೊಳಿಸಿಕೊಟ್ಟಿದ್ದಾರೆ. ಇನ್ನುಮುಂದೆ ಆ ಮಾರ್ಗದಲ್ಲಿ ನಡೆಯುವವರಿಗೆ ಈ ಕೃತಿ ನಿಜಕ್ಕೂ ರಾಜಮಾರ್ಗವಾಗಿ ಪರಿಣಮಿಸಿದೆಯೆಂದರೆ ಅತಿಶಯೋಕ್ತಿಯಲ್ಲ. ಕೆಟ್ಟಿರುವ ಪದ್ಯಪಾಠಗಳನ್ನು ತಮ್ಮ ಪ್ರತಿಭೆಯ ಬಲದಿಂದ ಶುದ್ಧವಾಗಿ ಕಟ್ಟಿಕೊಡುವ ಸಾರ್ಥಕ ಯತ್ನವನ್ನು ಅವರು ನಡೆಸಿದ್ದಾರೆ. ಈ ಕ್ಷೇತ್ರದಲ್ಲಿ ಕನ್ನಡದಲ್ಲಿ ಹಿಂದೆ ಕೆಲಸ ಮಾಡಿದ ವಿದ್ವಾಂಸರು ಬಿಡಿಬಿಡಿ ಲೇಖನಗಳನ್ನು ಬರೆದಿದ್ದರೇ ಹೊರತು, ಸ್ವತಂತ್ರ ಗ್ರಂಥವನ್ನಾರೂ ಬರೆದಿರಲಿಲ್ಲ. ಹಿಂದಿನವರು ಮಾಡಿರುವ ಅಷ್ಟಿಷ್ಟು ಕಾರ್ಯವನ್ನೆಲ್ಲ ಗಣನೆಗೆ ತೆಗೆದುಕೊಂಡು, ಅವರ ವಿಚಾರಗಳನ್ನು ಸಹಾನುಭೂತಿಯಿಂದ ಚರ್ಚಿಸಿ, ಕನ್ನಡ ಚಿತ್ರಕಾವ್ಯಕ್ಕೊಂದು ಖಚಿತವಾದ ಚೌಕಟ್ಟನ್ನು ಡಾ॥ ಶಾಸ್ತ್ರಿಯವರು ಈ ಕೃತಿಯ ಮೂಲಕ ನಿರ್ಮಿಸಿಕೊಟ್ಟಿದ್ದಾರೆ. ಸಂಸ್ಕೃತ ಮತ್ತು ಕನ್ನಡ ಚಿತ್ರಕಾವ್ಯ ಪ್ರಭೇದಗಳ ಚರ್ಚೆ ಇಲ್ಲಿ ಪ್ರಮುಖವಾಗಿ ಬಂದಿದೆಯಾದರೂ ತೆಲುಗು ಭಾಷೆಯನ್ನೂ ಬಲ್ಲ ಅವರು ಆ ಭಾಷೆಯ ಚಿತ್ರಕಾವ್ಯದ ಮಾದರಿಗಳನ್ನು ಅಲ್ಲಲ್ಲಿ ತೌಲನಿಕವಾಗಿ ಪ್ರಸ್ತಾಪಿಸಿದ್ದಾರೆ. ಸಂಸ್ಕೃತ-ಕನ್ನಡ ಮಾದರಿಗಳ ತೌಲನಿಕ ವಿವೇಚನೆಯಂತೂ ಉದ್ದಕ್ಕೂ ನಡೆದಿದೆ. ಹೀಗಾಗಿ ಈ ಕೃತಿ 'ತೌಲನಿಕ ಚಿತ್ರಕಾವ್ಯ'ವೆನ್ನ ಬಹುದಾದ ಗೌರವಕ್ಕೂ ಪಾತ್ರವಾಗಿದೆ.

ಗತಿಚಿತ್ರಗಳು ಮತ್ತು ಬಂಧಚಿತ್ರಗಳ ವಿಭಾಗದಲ್ಲಿರುವ ಸುಮಾರು ನೂರಕ್ಕೂ ಹೆಚ್ಚು ಚಿತ್ರಗಳು ಆ ಅಧ್ಯಾಯಗಳ ಆಸ್ವಾದನೆಗೆ ಪ್ರಯೋಜನಕಾರಿಯಾಗಿವೆ. ಕೃತಿಯ ಅಂತ್ಯದಲ್ಲಿರುವ ಅನುಬಂಧ ಬಹಳ ಅಚ್ಚುಕಟ್ಟಾಗಿದೆ, ಉಪಯುಕ್ತವಾಗಿದೆ. 'ಆಧಾರ ಗ್ರಂಥಸೂಚಿ' ಡಾ॥ ಶಾಸ್ತ್ರಿಯವರ ವಿಸ್ತಾರವಾದ ಅಧ್ಯಯನಕ್ಕೆ ಸಾಕ್ಷಿಯಾಗಿದೆ. ಗ್ರಂಥದೊಳಗೆ ಬಳಕೆಯಾಗಿರುವ ಸಂಸ್ಕೃತ-ಕನ್ನಡ ಲಕ್ಷಣ-ಲಕ್ಷ್ಯ ಪದ್ಯ

ಗಳ ಸಮಗ್ರ ಸೂಚಿಯೂ ಇಲ್ಲಿದೆ. ಚಿತ್ರಕಾವ್ಯದ ಯಾವ ಭೇದೋಪಭೇದವನ್ನು ಬೇಕಾದರೂ ಇಲ್ಲಿರುವ 'ವಿಶಿಷ್ಟ ಪದಸೂಚಿ'ಯ ಮೂಲಕ ಪತ್ತೆಹಚ್ಚಿಕೊಳ್ಳಬಹುದು. ಗ್ರಂಥದೊಡಲಿನಲ್ಲಿ ಬಂದಿರುವ ಕೃತಿಗಳ, ಲಕ್ಷಣಕಾರರ, ಕವಿಗಳ, ಈ ಕ್ಷೇತ್ರದಲ್ಲಿ ಕೆಲಸ ಮಾಡಿದ ವಿದ್ವಾಂಸರ ಹೆಸರುಗಳೂ ಇಲ್ಲಿ ಸಾಲುಗಟ್ಟಿ ಬಂದಿವೆ. ಗ್ರಂಥವೂ ಬಹು ಸುಂದರವಾಗಿ, ಅಚ್ಚುಕಟ್ಟಾಗಿ, ಮುದ್ರಣದೋಷ ರಹಿತವಾಗಿ ಹೊರಬಂದಿದೆ.

ಇದೊಂದು ಸವಾಲಿನ ರೂಪದ ಕಾರ್ಯ. ಇದನ್ನು ಡಾ॥ ಶಾಸ್ತ್ರಿಯವರು ಅರ್ಥಪೂರ್ಣ ರೀತಿಯಲ್ಲಿ ನಿರ್ವಹಿಸಿದ್ದಾರೆ; ಈ ವಿಷಯಕ್ಕೆ ಸಂಬಂಧಿಸಿದಂತೆ, ಕನ್ನಡದ ಮಟ್ಟಿಗೆ ಇಷ್ಟು ಶಾಸ್ತ್ರೀಯವೂ ವ್ಯಾಪಕವೂ ಸಮಗ್ರವೂ ಆದ ವಿವೇಚನೆ ನಡೆಯುತ್ತಿರುವುದು ನನಗೆ ತಿಳಿದಂತೆ ಇದೇ ಮೊದಲು ಎಂದು ಮುನ್ನುಡಿಯಲ್ಲಿ ಡಾ॥ ಎಚ್. ತಿಪ್ಪೇರುದ್ರಸ್ವಾಮಿಯವರು ಈ ಕೃತಿಯ ಮಹತ್ತ್ವವನ್ನು ಖಚಿತವಾಗಿ ಗುರುತಿಸಿದ್ದಾರೆ. ಚಿತ್ರಕಾವ್ಯವನ್ನು ಕುರಿತಂತೆ ಯಾವುದೇ ಭಾರತೀಯ ಭಾಷೆಯಲ್ಲೂ ಇಷ್ಟೊಂದು ದೊಡ್ಡ ಪ್ರಮಾಣದ ಗ್ರಂಥ ಪ್ರಾಯಃ ಇರಲಾರದು.

ಚಿತ್ರಕಾವ್ಯದಲ್ಲಿ ಧ್ವನಿಯಾಗಲಿ, ಗುಣೀಭೂತವ್ಯಂಗ್ಯವಾಗಲಿ ಇರುವುದಿಲ್ಲವೆಂಬ ಕಾರಣದಿಂದ ನಮ್ಮ ಪ್ರಾಚೀನ ಲಾಕ್ಷಣಿಕರು ಅದನ್ನು 'ಅಧಮ ಕಾವ್ಯ'ವೆಂದು ಕರೆದಿದ್ದಾರೆ. ಆದರೆ ಡಾ॥ ಶಾಸ್ತ್ರಿಯವರ ಈ ಕೃತಿಯನ್ನು ಓದುತ್ತಿದ್ದರೆ, ನಮ್ಮ ಬುದ್ಧಿಯನ್ನು ಅರಳಿಸುವ ಅಲ್ಲಿನ ರಸಘಟಿಕೆಗಳನ್ನು ಸವಿಯುತ್ತಿದ್ದರೆ ಚಿತ್ರಕಾವ್ಯವು ಅಧಮ ಕಾವ್ಯವೆಂಬ ಮಾತು ತಾನೇ ತಾನಾಗಿ ನಮ್ಮ ಅಂತರಂಗದಿಂದ ಕಳಚಿಹೋಗುತ್ತದೆ; ಆ ಕಾವ್ಯದ ವಿಚಾರವಲ್ಲಿ ಸ್ನೇಹವನ್ನೂ ಆಸಕ್ತಿಯನ್ನೂ ಕುತೂಹಲವನ್ನೂ ಅದು ಸಹೃದಯರಲ್ಲಿ ಹುಟ್ಟಿಸುತ್ತದೆ. ಈ ಕೃತಿಯ ಮೂಲಕ ಚಿತ್ರಕಾವ್ಯಕ್ಕೊಂದು ಗೌರವ ಸಂದಾಯವಾದಂತಾಗಿದ್ದು, ಅದು ಡಾ॥ ಶಾಸ್ತ್ರಿಯವರ ಬಹು ದೊಡ್ಡ ಸಾಧನೆಯೆಂದು ನಾನು ಭಾವಿಸುತ್ತೇನೆ.

ಕನ್ನಡ ಚಿತ್ರಕಾವ್ಯದ ಕ್ಷೇತ್ರಕ್ಕೆ ಡಾ॥ ಶಾಸ್ತ್ರಿಯವರ ಈ ಗ್ರಂಥ ಶಾಶ್ವತವೂ ಅಮೂಲ್ಯವೂ ಆದ ಕೊಡುಗೆ. ಇಷ್ಟೊಂದು ದೊಡ್ಡ ಕೃತಿಯನ್ನು ಮೊತ್ತಮೊದಲ ಬಾರಿಗೆ ಈ ಕ್ಷೇತ್ರಕ್ಕೆ ಅರ್ಪಿಸಿರುವ ಅವರ ಶ್ರಮ ಸಾರ್ಥಕವಾಗಿದೆ. 'ವರ್ಣಮಯ ಚಿತ್ರಕಾವ್ಯ ಪ್ರಪಂಚದ ಭೇದೋಪಭೇದಗಳ ರಚನೆ ಪಾಲನೆ ಪೋಷಣೆಗಳಲ್ಲಿ ಸಂತೋಷಿಸಿದ ಸಂಸ್ಕೃತ ಕನ್ನಡ ವಿದ್ವತ್ಕವಿಪರಂಪರೆಗೆ' ಡಾ॥ ಶಾಸ್ತ್ರಿಯವರು ಅಭಿಮಾನಪೂರ್ವಕವಾಗಿ ಈ ಕೃತಿಯನ್ನು ಸಮರ್ಪಿಸಿ ತಮ್ಮ ವಿನಯಸೌಜನ್ಯಗಳನ್ನು ಮೆರೆದಿದ್ದಾರೆ.

—ಡಾ॥ ಕೆ. ಅನಂತರಾಮು

# ಶಾಸನಗಳಲ್ಲಿ ಕರ್ನಾಟಕದ ವರ್ತಕರು*

ಡಾ॥ ಬಿ. ಆರ್. ಹಿರೇಮಠ ಅವರ 'ಶಾಸನಗಳಲ್ಲಿ ಕರ್ನಾಟಕದ ವರ್ತಕರು' ಎಂಬ ನಿಬಂಧವು, ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ವಣಿಕ ವರ್ಗದ ಚಟುವಟಿಕೆಗಳನ್ನು ಪುನಾರಚಿಸುವ ಒಂದು ಮಹತ್ತ್ವದ ಕೃತಿಯಾಗಿದೆ. ಪೀಠಿಕೆ, ವರ್ತಕರು ಮತ್ತು ವರ್ತಕರ ಪ್ರಕಾರಗಳು, ವರ್ತಕ ಸಂಘಗಳು, ವರ್ತಕರ ವ್ಯಾಪಾರ ಸ್ವರೂಪ ಮತ್ತು ಅಧಿಕಾರ ಸ್ವರೂಪ, ವರ್ತಕರ ಸಾಮಾಜಿಕ–ಧಾರ್ಮಿಕ–ವೀರ ಜೀವನ ಹಾಗೂ ಸಮಾರೋಪ ಎಂಬ ಆರು ಅಧ್ಯಾಯಗಳಲ್ಲಿ ವಿಷಯವನ್ನು ಸ್ತುತ್ಯರ್ಹ ರೀತಿಯಲ್ಲಿ ನಿರೂಪಿಸಲಾಗಿದೆ.

ನಿಬಂಧದ ಪ್ರಾರಂಭದಲ್ಲಿಯೇ ವರ್ತಕ ವರ್ಗವನ್ನು ವಿನಿಮಯ ವರ್ತಕರು ಮತ್ತು ಉತ್ಪಾದಕ ವಿನಿಮಯ ವರ್ತಕರು ಎಂದು ಗುರ್ತಿಸಿಕೊಂಡು, ಈ ನಿಬಂಧದ ವಿಷಯ ವ್ಯಾಪ್ತಿಯನ್ನು ಕೇವಲ ವಿನಿಮಯ ವರ್ತಕರಿಗೆ ಮಾತ್ರ ಸೀಮಿತಗೊಳಿಸಿ ಕೊಳ್ಳುವುದರ ಮೂಲಕ ಆಗಬಹುದಾಗಿದ್ದ ಅತಿವ್ಯಾಪ್ತಿದೋಷವನ್ನು ಸೂಕ್ತರೀತಿ ಯಲ್ಲಿ ಲೇಖಕರು ನಿವಾರಿಸಿಕೊಂಡಿರುವುದು ಗಮನಾರ್ಹವಾದ ಮತ್ತು ಮೆಚ್ಚು ವಂತಹ ಸಂಗತಿಯಾಗಿದೆ. ಮಾನವಿಕ ವಿಜ್ಞಾನಗಳ ಸಂಶೋಧನ ಭಾಷೆ, ನಿರೂಪಣೆ ಹೇಗೆ ಅಲಂಕಾರ ರಹಿತವಾಗಿ, ಆದರೆ ಸರಳವಾಗಿ, ನೇರವಾಗಿ ಮನಮುಟ್ಟುವಂತೆ ಇರಬೇಕು ಎಂಬುದಕ್ಕೆ ಒಂದು ಅತ್ಯುತ್ತಮ ಮಾದರಿಯನ್ನು ಗ್ರಂಥಕರ್ತರು ತಮ್ಮ ಈ ನಿಬಂಧದ ಮೂಲಕ ಮನಗಾಣಿಸಿದ್ದಾರೆ. ಅಷ್ಟೇ ಅಲ್ಲ. ಇಂತಹ ವಿಷಯ ವೊಂದನ್ನು ಆರಿಸಿಕೊಂಡು ವ್ಯವಸ್ಥಿತ ರೀತಿಯಲ್ಲಿ ಜೋಡಿಸಿ, ತಲಸ್ಪರ್ಶಿಯಾಗಿ ವಿವರಿಸಿ, ತೀರ್ಮಾನಗಳನ್ನು ನೀಡುವಲ್ಲಿ ಕೂಡ ಲೇಖಕರು ತಮ್ಮ ಜಾಣ್ಮೆಯನ್ನು ಮೆರೆದಿದ್ದಾರೆ.

ಶಾಸನಗಳಲ್ಲಿ ದೊರೆಯುವ ವಿಪುಲವಾದ ಮಾಹಿತಿಯನ್ನು ಸಂಗ್ರಹಿಸಿ, ಜೋಡಿಸಿ, ನಿಬಂಧವನ್ನು ವ್ಯವಸ್ಥಿತ ರೀತಿಯಲ್ಲಿ ಸಿದ್ಧಪಡಿಸಿದ್ದಾರೆ ಎಂಬುದರಲ್ಲಿ ಅನುಮಾನವಿಲ್ಲ. ಈ ನಿಬಂಧವನ್ನು ಸಿದ್ಧಪಡಿಸುವ ಕಾಲದವರೆಗೂ ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಇತರ ವಿದ್ವಾಂಸರಿಂದ ಬೇರೆ ಬೇರೆ ಗ್ರಂಥಗಳಲ್ಲಿ ಮತ್ತು ನಿಯತ ಕಾಲಿಕೆಗಳಲ್ಲಿ ಪ್ರಕಟವಾಗಿರುವ ಬಹುತೇಕ ಸಂಪ್ರಬಂಧಗಳನ್ನು ಮತ್ತು ಲೇಖನಗಳನ್ನು ಲೇಖಕರು ನಿಬಂಧದ ಪೀಠಿಕೆ ಮತ್ತು ಗ್ರಂಥಸೂಚಿ ಭಾಗಗಳಲ್ಲಿ ಉಲ್ಲೇಖಿಸಿದ್ದಾರೆ. ಆದರೆ ಇವುಗಳಲ್ಲಿ ಬಹಳಷ್ಟನ್ನು ತಮ್ಮ ನಿಬಂಧದಲ್ಲಿ ಚರ್ಚೆಗೆ ಒಳಪಡಿಸಿಲ್ಲ. ಇಲ್ಲಿ ಡಾ॥ ಎಂ. ಚಿದಾನಂದಮೂರ್ತಿಯವರ 'ಲಿಂಗಾಯತ ಅಧ್ಯಯನ' ಗ್ರಂಥದ ಅರಿಕೆ

---

ಪ್ರಕಾಶಕರು : ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
ಮೊದಲ ಮುದ್ರಣ : 1986. ಪುಟಗಳು : xiv + 198. ಬೆಲೆ : 38 ರೂಪಾಯಿಗಳು.

ಭಾಗದಲ್ಲಿ ಬರುವ ಈ ವಾಕ್ಯಗಳು ಪ್ರಸ್ತುತವೆನಿಸುತ್ತವೆ. "ಯಾವನೇ ಸಂಶೋಧಕನಿಗೂ ತನ್ನ ಬರೆಹಗಳು ಚರ್ಚೆಗೆ ಗುರಿಯಾಗಿ ಅರಿವನ್ನು ವಿಸ್ತರಿಸಲು ಸಹಾಯಕವಾಗುವುದು ತನ್ನ ಬಗ್ಗೆ ತೋರುವ ಗೌರವ ಎಂಬ ಭಾವನೆ ಇರುತ್ತದೆ. ಎಲ್ಲ ಸಂಗತಿಗಳು ಒಪ್ಪಿತವಾದುವೇ ಇಲ್ಲವೇ ಎಂಬುದು ಮುಖ್ಯವಾದರೂ ಅದಕ್ಕೆ ಎರಡನೇ ಸ್ಥಾನವೇ ಹೊರತು ಪ್ರಥಮ ಸ್ಥಾನವಲ್ಲ." ಈ ಹಿನ್ನೆಲೆಯಲ್ಲಿ ಹಿಂದಿನವರು ಈ ವಿಷಯಕ್ಕೆ ಸಂಬಂಧಿಸಿದಂತೆ ನಡೆಸಿದ ಶೋಧಗಳ ಸಾರಾಸಾರಗಳು ಸ್ಪಷ್ಟಗೊಳ್ಳದೆ ಹೋಗುವುದು ಈ ನಿಬಂಧದ ಬಹು ದೊಡ್ಡ ಕೊರತೆಯಾಗಿದೆ. ಹಾಗೇ ಈ ನಿಬಂಧದ ಉದ್ದಕ್ಕೂ ಗಮನ ಸೆಳೆಯುವ ಮತ್ತೊಂದು ಅಂಶವೆಂದರೆ, ಹತ್ತಾರು ಕಡೆ ಬರುವ ವ್ಯಕ್ತಿನಾಮಗಳ, ಸ್ಥಳನಾಮಗಳ ಸಾಲು ಸಾಲುಗಳು. ಇವು ಸುಮಾರು ಇಡೀ ಗ್ರಂಥದ ಹದಿನಾಲ್ಕರಷ್ಟು ಭಾಗವನ್ನು ಆವರಿಸಿ, ಓದುಗರಿಗೆ ಸವಾಲಾಗಿದೆ. ನಿಬಂಧವೊಂದನ್ನು ಪಿಎಚ್ ಡಿ. ಪ್ರಶಸ್ತಿಗಾಗಿ ಸಾದರಪಡಿಸುವಾಗ ಇದು ಅಗತ್ಯವೆನಿಸಬಹುದಾದರೂ, ಅದೇ ಕೃತಿ ಗ್ರಂಥರೂಪದಲ್ಲಿ ಬರುವಾಗ ಓದುಗರನ್ನು ಗಮನದಲ್ಲಿಟ್ಟುಕೊಂಡು ಇದನ್ನು ಸೂಕ್ತರೀತಿಯಲ್ಲಿ ನಿವಾರಿಸಬಹುದಾಗಿತ್ತು.

ಈ ನಿಬಂಧದ ವ್ಯಾಪ್ತಿಯಲ್ಲಿಯೇ ಗಮನಿಸಬಹುದಾಗಿದ್ದ ಹಲವಾರು ಅಂಶಗಳು, ವಿವೇಚನೆಗೊಳಗಾಗದೇ ಹೋಗಿರುವುದು ಕಂಡುಬರುತ್ತದೆ. ಅಂತಹ ಅಂಶಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಸೂಚ್ಯವಾಗಿ ಹೇಳಬಹುದು :

ವಡ್ಡ ವ್ಯವಹಾರಿಗಳ ಬಗ್ಗೆ ತಿಳಿಸುವಲ್ಲಿ, ಶ್ರೀಮನ್ಮಹಾವಡ್ಡ ವ್ಯವಹಾರಿ ಕಲ್ಹಣ ರಾವುತನ ಹೆಸರು ; ಹಾಗೇ ಆತನ ಔದಾರ್ಯದ ಫಲವಾಗಿ ಮೂಡಿಬಂದ ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಾಲಯದ ಉಲ್ಲೇಖ; ವರ್ತಕರ ವ್ಯಾಪಾರ ಹಾಗೂ ಅಧಿಕಾರದ ಸ್ವರೂಪದ ಬಗ್ಗೆ ಚರ್ಚಿಸುವಾಗ ಬೇಲೂರು, ಹಳೆಯಬೀಡು, ವಿಷ್ಣುಸಮುದ್ರಗಳ ಮಣಿಗಾರರು ಅನೇಕ ಮಿತ್ರ ಮತ್ತು ಶತ್ರುರಾಷ್ಟ್ರಗಳೊಂದಿಗೆ ಮಾಡುತ್ತಿದ್ದ ರತ್ನವ್ಯಾಪಾರದ ವಿವರ ; ಹಾಗೇ ಶ್ರೀಮಂತ ವರ್ತಕರು ಹಣವನ್ನು ಸದುಪಯೋಗಪಡಿಸದಿದ್ದರೆ ನಾಶವಾಗುತ್ತದೆಯೆಂಬ ಅಂಶ (ಎ.ಕ. XI ದಾವಣಗೆರೆ, 90); ವರ್ತಕರು ಬಡ್ಡಿ ವ್ಯವಹಾರವನ್ನು ಮಾಡುತ್ತಿದ್ದ ವಿಷಯ (ಎ.ಕ. III ತಿ· ನರಸಿಪುರ, 129), ಹೀಗೆ ಈ ಪಟ್ಟಿಯನ್ನು ಬೆಳೆಸುತ್ತಾ ಹೋಗಬಹುದು.

ನಖರ, ತೋಟಿಗ, ಮುಮ್ಮುರಿದಂಡ ಮುಂತಾದ ಪಂಗಡಗಳ ಬಗೆಗೆ ವಿಷಯಗಳನ್ನು ಪ್ರಸ್ತಾವಿಸುವಾಗ ಶಾಸನಗಳಷ್ಟೇ ಅಲ್ಲ, ಶಾಸನೇತರ ಆಕರಗಳೂ ಮತ್ತು ಕ್ಷೇತ್ರಕಾರ್ಯದ ನೆರವೂ ತೀರ ಅಗತ್ಯವಾಗಿದ್ದುವೆಂಬರಿವು ಸಹಜವಾಗಿಯೇ ಉಂಟಾಗುತ್ತದೆ.

ಹೀಗೆ ಇಡೀ ನಿಬಂಧವನ್ನು ಗಮನಿಸಿದಾಗ ಲೇಖಕರು ವಿಸ್ತಾರವಾದ ವಿಷಯವನ್ನು ಸೂಕ್ತವಾಗಿ ಮಂಡಿಸಿದ್ದರೂ, ಇನ್ನೂ ಸಾಕಷ್ಟು ವಿಷಯಗಳು, ವಿವರಗಳು,

ಕೈತಪ್ಪಿರುವುದು ಗೋಚರಿಸುತ್ತದೆ. ವರ್ತಕರ ಬಗೆಗೆ ಇದ್ದ ವಡ್ಡರಾವುಳ ; ಪೆರ್ಜ್ಜುಂಕ, ಬಿಲ್ಕೊಡೆ, ಇತ್ಯಾದಿ ಸುಂಕಗಳು : ಪ್ರಾಣಿಗಳ ಮೇಲಿನ ಪರಿಗೆ ಸಂಬಂಧಿಸಿದ ಸುಂಕಗಳು ಮುಂತಾದವುಗಳನ್ನು ಕೂಡ ನಿಬಂಧದಲ್ಲಿ ವಿಚಾರಮಾಡಬಹುದಾಗಿದ್ದಿತು.

ಐಯಾವೊಳೆ ಐನೂರ್ವರು ವರ್ತಕರ ಬಗೆಗಿನ ಜಾನಪದ ಮೂಲ ಹಾಗೂ ಗುಪ್ತಶಾಸ್ತ್ರ ಮುಂತಾದ ವಿಷಯಗಳ ಬಗೆಗಿನ ಲೇಖಕರ ಅಭಿಪ್ರಾಯಗಳು ಈ ಕ್ಷೇತ್ರಕ್ಕೆ ಸಂದ ಅಮೂಲ್ಯ ಕಾಣಿಕೆಗಳಾಗಿವೆ.

ಸಂಶೋಧನ ಕ್ಷಿತಿಜದಲ್ಲಿ ಶ್ರಮಸಾಧ್ಯವಾದ ಇಂತಹ ಕಾರ್ಯಗಳನ್ನು ವ್ಯವಸ್ಥಿತವಾಗಿ ಮಾಡಬಲ್ಲ ಸಾಮರ್ಥ್ಯವುಳ್ಳವರೆಂಬುದನ್ನು ಡಾ॥ ಬಿ. ಆರ್. ಹಿರೇಮಠರು ತಮ್ಮ ಈ ಅಮೂಲ್ಯವಾದ ನಿಬಂಧದ ಮೂಲಕ ತೋರಿಸಿಕೊಟ್ಟಿದ್ದಾರೆ, ಮತ್ತು ಅಭಿನಂದನಾರ್ಹರಾಗಿದ್ದಾರೆ.

—ಪಿ. ವಿ. ಕೃಷ್ಣಮೂರ್ತಿ

# ಈ ಸಲದ ಸಮ್ಮೇಳನಾಧ್ಯಕ್ಷ ಭಾಷಣ

ಈ ವರ್ಷ ಅಕ್ಟೋಬರ್ 29ರಿಂದ ನವೆಂಬರ್ 1ರ ವರೆಗೆ ಕಲಬುರ್ಗಿಯಲ್ಲಿ ನಡೆದ ಅಖಿಲ ಭಾರತ 58ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಅಲ್ಲಿ ನಡೆದ ಮೂರನೆಯ ಸಮ್ಮೇಳನ. 1928ನೆಯ ಇಸವಿಯಲ್ಲಿ ನಡೆದ ಮೊದಲನೆಯ ಸಮ್ಮೇಳನಕ್ಕೆ ಆಚಾರ್ಯ ಬಿ.ಎಂ.ಶ್ರೀ.ಯವರು ಅಧ್ಯಕ್ಷರಾಗಿದ್ದರು ; ಎರಡನೆಯ ಸಮ್ಮೇಳನ 1949ರಲ್ಲಿ ನಡೆಯಿತು ; ಈ 32ನೆಯ ಸಾಹಿತ್ಯ ಸಮ್ಮೇಳನಕ್ಕೆ ರೆ॥ ಚೆನ್ನಪ್ಪ ಉತ್ತಂಗಿಯವರು ಅಧ್ಯಕ್ಷರಾಗಿದ್ದರು ; ಇದೀಗ ಅಲ್ಲಿ ನಡೆದ 58ನೆಯ ಸಾಹಿತ್ಯ ಸಮ್ಮೇಳನಕ್ಕೆ ಹೆಸರಾಂತ ಕವಿ ಡಾ॥ ಸಿದ್ಧಯ್ಯ ಪುರಾಣಿಕರು ಅಧ್ಯಕ್ಷರಾಗಿದ್ದರು. ಅವರ ಭಾಷಣದ ಕೆಲವು ಮುಖ್ಯಾಂಶಗಳನ್ನು ಉಲ್ಲೇಖಿಸುತ್ತ, ಭಾಷೆಯ ದೃಷ್ಟಿಯಿಂದ ಗಮನಾರ್ಹವಾದ ಭಾಗಗಳನ್ನು 'ಲೋಚನ'ದ ವಾಚಕರ ಮುಂದಿಡಲು ಬಯಸುತ್ತೇವೆ.

ತಮಗೆ ಜನ್ಮವಿತ್ತ ರಾಯಚೂರು ಜಿಲ್ಲೆಯನ್ನೂ ; ಕವಿಯನ್ನಾಗಿ ಕನ್ನಡದ ಹೋರಾಟಗಾರನನ್ನಾಗಿ ಆಡಳಿತಗಾರನನ್ನಾಗಿ ರೂಪಿಸಿದ ಕಲಬುರ್ಗಿ ಜಿಲ್ಲೆಯನ್ನೂ; ತಮ್ಮ ಕನ್ನಡ ಭಕ್ತಿಗೆ ಒರೆಗಲ್ಲಾಗಿ ನಿಂತ ಬೀದರ ಜಿಲ್ಲೆಯನ್ನೂ ಕಳಕಳಿಯಿಂದ ಸ್ಮರಿಸಿಕೊಂಡು, ಬೀದರ ಸಾಹಿತ್ಯ ಸಮ್ಮೇಳನದಿಂದ ಈಚೆಗೆ ಕಣ್ಮರೆಯಾದ 'ಮಹಾ ಸಾಹಿತಿ' ಮಾಸ್ತಿ ವೆಂಕಟೇಶ ಅಯ್ಯಂಗಾರರೇ ಆದಿಯಾಗಿ ಅನೇಕಾನೇಕ 'ಪಾವನ ಚೇತನ'ಗಳಿಗೆ ತಲೆಬಾಗಿ, ಸಿದ್ಧಯ್ಯಪುರಾಣಿಕರು ಕಲಬುರ್ಗಿ ಪ್ರಾಂತದ ಹಿರಿಮೆ ಗರಿಮೆಗಳನ್ನು ಹೆಮ್ಮೆಯಿಂದ ಶ್ರೋತೃಗಳ ಗಮನಕ್ಕೆ ತಂದರು : "ಹಲವು ಸಾಮ್ರಾಜ್ಯಗಳಿಗೆ ತೊಟ್ಟಿಲಾದುದು ಈ ಭಾಗ ; ಕರ್ನಾಟಕ ಇತಿಹಾಸದ ಅನೇಕ ಉಜ್ವಲ ಅಧ್ಯಾಯಗಳು ರಚಿತವಾದುದು ಈ ಭಾಗದಲ್ಲಿ ; ಕನ್ನಡದ ಕಾವ್ಯ ಗಂಗೋತ್ರಿ ಇರುವುದು ಈ ಭಾಗದಲ್ಲಿ ; ಬಡವರ ಗುಡಿಸಲುಗಳವರೆಗೂ ಭಕ್ತಿಗಂಗೆಯನ್ನು ಹರಿಸಿದ ಹರಿದಾಸರು, ಮಹಾಕವಿಗಳು, ಸ್ವಾತಂತ್ರ್ಯ ವೀರರು, ಶಿಲ್ಪಿಗಳು, ಶರಣರು, ಸಂತರು, ಮಹಾಂತರು ಇದನ್ನು ಪುಣ್ಯಭೂಮಿಯಾಗಿಸಿದ್ದಾರೆ... ಹಿಂದಿನಂತೆ ಈಗಲೂ ಸಾಹಿತ್ಯ ಸಂಸ್ಕೃತಿಗಳ ಹೊಂಬೆಳೆಯಿಲ್ಲಿ ಬಂದೇ ತೀರುವುದು. ಇದಾಗಲೇ ಬಂಗಾರದ ಬೆಳೆಯಿಲ್ಲಿ ಬಂದಿದೆ, ಭರದಿಂದೆ ಬರುತ್ತಿದೆ. ಖ್ಯಾತ ಕವಿ ಕವಯಿತ್ರಿಯರನ್ನೂ ಉದಿತೋದಿತ ಕವಿಗಳನ್ನೂ ಕಥೆ ಕಾದಂಬರಿಗಳ ಸ್ರಷ್ಟಾರರನ್ನೂ ಮಕ್ಕಳ ಸಾಹಿತಿಗಳನ್ನೂ ನಾಟಕಕಾರರನ್ನೂ ಸಂಶೋಧಕರನ್ನೂ ಪಂಡಿತ ಪ್ರವರರನ್ನೂ ಸಿದ್ಧಸಾಹಿತಿಗಳನ್ನೂ ಪ್ರಾಧ್ಯಾಪಕರನ್ನೂ ಶಿಕ್ಷಣ ತಜ್ಞರನ್ನೂ ಸಾಹಿತ್ಯೋಪಾಸಕರನ್ನೂ ನೀಡಿರುವ ಈ ಭಾಗ ಇನ್ನೂ ಮಹೋನ್ನತ ಕವಿ-ಸಾಹಿತಿಗಳನ್ನು ನೀಡಲೇಬೇಕು, ನೀಡಿಯೇ ನೀಡುವುದು. ಆ ದಿನ ಬೇಗ ಬರಲಿ" ಎಂದು

ಪ್ರಾರ್ಥಿಸಿದ್ದಾರೆ. ಪುರಾಣಿಕರ ಸ್ಮೃತಿಪಟಲದಲ್ಲಿ ನೂರಾರು ಹೆಸರುಗಳ ಪಟ್ಟಿಯೇ ಮೂಡಿಬಂದಿದೆ.

ಈಗ ಏಕೀಕರಣದ ಗುರಿ ನೆರವೇರಿದ್ದರೂ ಏಕೀಕೃತ ಕರ್ನಾಟಕದಲ್ಲಿ ಸರ್ವತ್ರ ಕನ್ನಡ ಭಾಷೆಯು ಬಳಕೆ ಇಲ್ಲದಿರುವುದನ್ನು ಪುರಾಣಿಕರು ವಿಷಾದದಿಂದ ನಮ್ಮ ಗಮನಕ್ಕೆ ತಂದು, ಕನ್ನಡೀಕರಣದ ತುರ್ತು ಅಗತ್ಯವನ್ನು ಒತ್ತಿ ಹೇಳಿದರು. ಹುಟ್ಟುಕನ್ನಡಿಗರ ಮಾತೃಭಾಷೆ ಕನ್ನಡ. ಮಾತೃಭಾಷೆಯ ಮಹತ್ತ್ವ ಕುರಿತು ಪುರಾಣಿಕರ ಮಾತು ಮನನೀಯ.:

ಕನ್ನಡೀಕರಣ: "ಮಾತೃಭಾಷೆ ಅವರವರ ಶಕ್ತಿವಿಕಾಸಕ್ಕೆ, ಅಂತರಂಗ ಪ್ರಕಾಶಕ್ಕೆ ಮಾತೃಕೆ. ಆದುದರಿಂದ ನಮ್ಮ ಮಾತೃಭಾಷೆಯಾದ ಕನ್ನಡ ನಮ್ಮೆಲ್ಲರ ಪೂರ್ಣಾಭ್ಯುದಯಕ್ಕೆ, ಸರ್ವಾಂಗೀಣ ಪ್ರಗತಿಗೆ ಮೂಲಾಧಾರ. ಪ್ರಯತ್ನಬಲದಿಂದ ಮಾನವನ ಬುದ್ಧಿಯ ಭಾಷೆ ಯಾವುದಾದರೂ ಆಗಬಹುದು, ಅದೂ ಅಪೂರ್ಣವಾಗಿ! ಆದರೆ ಅವನ ಹೃದಯದ ಭಾಷೆಯಾಗಬಲ್ಲದು ಒಂದೇ ಒಂದು: ಅದೇ ಅವನ ಮಾತೃಭಾಷೆ. ಇಷ್ಟೇ ಅಲ್ಲ, ಬೇರೆ ಭಾಷೆಯನ್ನು ಕಲಿಯಲು ಪಡಬೇಕಾದ ಕಷ್ಟದ ನೂರರಲ್ಲೊಂದು ಪಾಲು ಕಷ್ಟಪಟ್ಟರೂ ಅದು ಹೃದಯದ ಭಾಷೆಯ ಜೊತೆಗೆ ಬುದ್ಧಿಯ ಭಾಷೆಯೂ ಆಗುವುದು.

"ಆದುದರಿಂದಲೇ ಕನ್ನಡೀಕರಣವೇ ಕನ್ನಡಿಗರ ಸಮುದ್ಧರಣಕ್ಕೆ ಸಂಜೀವಿನೀ ಶಕ್ತಿ. ಕನ್ನಡೀಕರಣಕ್ಕಾಗಿಯಲ್ಲವೆ ಕರ್ನಾಟಕದ ಏಕೀಕರಣವಾದುದು? ವರ್ಷಕ್ಕೊಮ್ಮೆ ರಾಜ್ಯೋತ್ಸವವನ್ನು ವಿಜೃಂಭಣೆಯಿಂದ ಆಚರಿಸಿ, ತನು ಕನ್ನಡ, ಮನ ಕನ್ನಡ, ಪ್ರಾಣ ಕನ್ನಡವೆಂದು ಘೋಷಿಸಿ, ಭುವನೇಶ್ವರಿಯ ಪ್ರಸಾದ ಪಡೆದುಕೊಂಡು ಹೋಗಲಿಕ್ಕಾಗಿ ಆಗಲಿಲ್ಲ ಕರ್ನಾಟಕದ ಏಕೀಕರಣ. ಈ ನಾಡಿನ ರೈತರ, ಕಾರ್ಮಿಕರ. ದಲಿತರ, ದುರ್ಬಲರ ಏಳಿಗೆ ಕನ್ನಡ ಮಾಧ್ಯಮದಲ್ಲಿ ಎಲ್ಲ ಶಿಕ್ಷಣ, ಕನ್ನಡದಲ್ಲಿ ಎಲ್ಲ ಹಂತಗಳ ಆಡಳಿತ, ಕನ್ನಡದಲ್ಲಿ ಎಲ್ಲ ಸ್ತರಗಳಲ್ಲಿ ನ್ಯಾಯನಿರ್ಣಯ ನಡೆದಾಗ ಮಾತ್ರ ಸಾಧ್ಯವೆಂಬ ಸತ್ಯಸ್ಯಸತ್ಯ ಏಕೀಕರಣ ಚಳುವಳಿಯ ಚಾಲಕಶಕ್ತಿಯಾಗಿದ್ದಿತು. ಈ ನೆಲದ ಉಪ್ಪಾದ ಇವರು ಇನ್ನುಮುಂದೆಯೂ ಇಂಗ್ಲಿಷ್ ಬಲ್ಲವರನ್ನು ಅವಲಂಬಿಸಿ ಪರಾವಲಂಬನದ ನರಕದಲ್ಲಿರಬೇಕೆಂದು ವಾದಿಸುವವರಿದ್ದರೆ ಅವರು ಶ್ರೀಸಾಮಾನ್ಯರ ಹಗೆಗಳೆಂದೇ ಹೇಳಬೇಕಾಗುತ್ತದೆ.

"ಈ ನಾಡಿನ ರೈತರು, ದುಡಿಮೆಗಾರರು, ದಲಿತರು, ಕಸಬುದಾರರು, ಗ್ರಾಮಸಭೆಯಿಂದ ಶಾಸನ ಸಭೆಯವರೆಗೆ, ನ್ಯಾಯಪಂಚಾಯತಿಯಿಂದ ಉಚ್ಚ ನ್ಯಾಯಾಲಯದವರೆಗೆ, ಕುಟೀರ ಕೈಗಾರಿಕೆಯಿಂದ ಬೃಹತ್ ಕಾರ್ಯಾಗಾರಗಳವರೆಗೆ, ಮಾರುಕಟ್ಟೆಯಿಂದ ಅಂಚೆ–ತಂತಿ, ಬ್ಯಾಂಕು, ರೈಲು, ಅಂಗಡಿ, ಉಗ್ರಾಣಗಳವರೆಗೆ ಎಲ್ಲೆಲ್ಲಿಯೂ ಕನ್ನಡೀಕರಣವಾಗುವುದು ತಮ್ಮ ಅಭ್ಯುದಯದ ಮೊದಲ ಮೆಟ್ಟಲೆಂದು ತಿಳಿದು ಅದನ್ನು ತಂತಮ್ಮ ಹೋರಾಟದ ಮಹತ್ವದ ಅಂಗವನ್ನಾಗಿ ಮಾಡಿಕೊಳ್ಳಲಿ."

ಕನ್ನಡ ನಾಡಿನಲ್ಲಿ ಕನ್ನಡದ ಸಾರ್ವಭೌಮತ್ವವನ್ನು ಸ್ಥಿರವಾಗಿ, ಶಾಶ್ವತವಾಗಿ ನೆಲೆಗೊಳಿಸಲು ರಾಜ್ಯಸರ್ಕಾರದ ಮುಂದೆ ಸಮ್ಮೇಳನಾಧ್ಯಕ್ಷರು 15 ಕಾರ್ಯಾಂಶಗಳ ಕಾರ್ಯಕ್ರಮವನ್ನು ಸೂಚಿಸಿ, ಅವುಗಳ ಅನುಷ್ಠಾನಕ್ಕೆ ನಿಷ್ಠುರವಾಗಿಯೇ ಕರೆ ನೀಡಿದರು. ಆ ಅಂಶಗಳು ಯಾವುವೆಂದರೆ :

೧. ಮಹಾಜನ ಆಯೋಗವನ್ನು ಅನುಷ್ಠಾನಕ್ಕೆ ತರುವಲ್ಲಿ ಕರ್ನಾಟಕದ ಎಲ್ಲ ರಾಜಕೀಯ ಪಕ್ಷಗಳೂ ಒಮ್ಮತದಿಂದ ಹೋರಾಡತಕ್ಕದ್ದು.

೨. ವಾಣಿಜ್ಯೋದ್ಯಮಗಳಲ್ಲಿ ಕನ್ನಡಿಗರಿಗೆ ಉತ್ತೇಜನ, ಉದ್ಯೋಗಾವಕಾಶ ಸಂವರ್ಧನೆ.

೩. ಅಚ್ಚುಕಟ್ಟು ಪ್ರದೇಶಗಳಲ್ಲಿಯ ಭೂಮಿ ಕನ್ನಡಿಗರ ಕೈಯಲ್ಲೇ ಉಳಿಯುವಂತೆ ಕ್ರಮ.

೪. ಡಾ॥ ಸರೋಜಿನಿ ಮಹಿಷಿ ಅವರ ವರದಿಯನ್ನು ಕೂಡಲೆ ಸ್ವೀಕರಿಸಿ ಕಾರ್ಯಗತಗೊಳಿಸುವುದು.

೫. ನಿರಕ್ಷರರಾಗಿ ಉಳಿದಿರುವವರೆಲ್ಲರಿಗೂ 1991ರೊಳಗಾಗಿ ಅಕ್ಷರ ಕಲಿಸಿ ಅವರು ಕನ್ನಡ ಕುಲದೊಳಗೇ ಉಳಿಯುವಂತೆ ಮಾಡತಕ್ಕದ್ದು.

೬. 1991ರ ಜನಗಣತಿಯನ್ನು ಎದುರಿಸಲು ಕನ್ನಡ–ಕರ್ನಾಟಕದ ಹಿತರಕ್ಷಣೆಗಾಗಿ ಈಗಿನಿಂದಲೇ ಸಿದ್ಧತೆ ಮಾಡಿಕೊಳ್ಳಬೇಕು.

೭. ಕನ್ನಡ ಆಡಳಿತದ ಕನ್ನಡೀಕರಣವನ್ನು ಕಟ್ಟುನಿಟ್ಟಾಗಿ ತ್ವರೆಯಿಂದ ಸಾಧಿಸಬೇಕು.

೮. ಈಗ (ಸಂವಿಧಾನದ 301ನೆಯ ಅನುಚ್ಛೇದದ ಪ್ರಕಾರ) ಕೇಂದ್ರಕ್ಕೆ ಮಾತ್ರವಿರುವ ಅಂತರ್‌ಪ್ರಾಂತೀಯ ವಲಸೆಯನ್ನು ನಿಯಂತ್ರಿಸುವ ಅಧಿಕಾರವನ್ನು ಎಲ್ಲ ರಾಜ್ಯಗಳಿಗೂ ಕೊಡಬೇಕು. ಈ ದಿಶೆಯಲ್ಲಿ ರಾಜ್ಯಸರ್ಕಾರ ಮುಂದಿನ ಕಾರ್ಯಕ್ರಮ ಕೈಗೊಳ್ಳಬೇಕು.

೯. ಕೇಂದ್ರ ಸರ್ಕಾರದ ಹತೋಟಿಯಲ್ಲಿರುವ ದೂರದರ್ಶನ ಮತ್ತು ಆಕಾಶವಾಣಿಯಲ್ಲಿ ಎಲ್ಲ ರಾಜ್ಯಗಳಿಗೂ ದ್ವಿತೀಯ ಚ್ಯಾನೆಲ್ ಒದಗಿಸುವಲ್ಲಿ ರಾಜ್ಯಸರ್ಕಾರ ಪ್ರಯತ್ನಶೀಲವಾಗಬೇಕು.

೧೦. ಕನ್ನಡ ಗಡಿಗಳನ್ನು ಭದ್ರಪಡಿಸಲು, ಗಡಿ ಭಾಗಗಳ ಕನ್ನಡ ಶಾಲೆಗಳನ್ನು ಆದರ್ಶ ಶಾಲೆಗಳನ್ನಾಗಿ ಮಾಡಬೇಕು.

೧೧. ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆಗೆ ಸ್ವಾಗತ. "ಇದು ಈಗಿರುವ ವಿಶ್ವವಿದ್ಯಾಲಯಗಳ, ಕನ್ನಡ ಅಧ್ಯಯನ ಸಂಸ್ಥೆಗಳ, ವಿಸ್ತೃತ ಆವೃತ್ತಿಯಾಗಬಾರದು." ಕನ್ನಡ ವಿಶ್ವವಿದ್ಯಾಲಯ ಅನುವಾದಕಾರ್ಯಕ್ಕೆ ಪ್ರಾಮುಖ್ಯ ಕೊಡಬೇಕು ; ಕರ್ನಾಟಕ ಇನ್‌ಸ್ಕ್ರಿಪ್‌ಷನ್ಸ್, ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್, ಎಲ್ಲ ಜಿಲ್ಲೆಗಳ ಎಲ್ಲ ಶಾಸನಗಳನ್ನು ಪ್ರಕಟಿಸಬೇಕು, ಎಂದು ಮುಂತಾಗಿ ಇನ್ನೂ ಕೆಲವು ಉಪಯುಕ್ತ ಸಲಹೆಗಳನ್ನು ಪುರಾಣಿಕರು ನೀಡಿದ್ದಾರೆ.

೧೨. ಶ್ರೀ ಜಿ. ನಾರಾಯಣ ಅವರು ಮಂಡಿಸಿ ಸರಕಾರವು ಇದಾಗಲೇ ಅಂಗೀಕರಿಸಿದೆಯೆಂದು ಹೇಳಲಾಗಿರುವ 'ಕನ್ನಡ ಸಾಹಿತ್ಯ ಪ್ರಸಾರ ನಿಗಮ'ದ ಯೋಜನೆಯನ್ನು ಕೂಡಲೇ ಕೈಗೆತ್ತಿಕೊಳ್ಳಬೇಕು. ಪುಸ್ತಕ ಪ್ರಕಾಶನ ಹಾಗೂ ಪ್ರಸಾರ ಎರಡನ್ನೂ ಏಕಕಾಲಕ್ಕೆ ಸಾಧಿಸುತ್ತ ಹೋಗಬೇಕು.

೧೨. ಈ ನಿಗಮದ ಉದ್ದೇಶ ಈಡೇರಲು ಕನಿಷ್ಠ ಐದು ಹಳ್ಳಿಗಳಿಗೊಂದರಂತೆ ಐದು ಸಾವಿರ ಕನ್ನಡ ವಾಚನಾಲಯಗಳ ಜಾಲವೊಂದನ್ನು ಸೃಷ್ಟಿಸಬೇಕು.

೧೪. ಕಡ್ಡಾಯ ಪ್ರಾಥಮಿಕ ಶಿಕ್ಷಣ ಯೋಜನೆಯನ್ನೂ, ವಯಸ್ಕರ ಶಿಕ್ಷಣ ಯೋಜನೆಯನ್ನೂ ಪೂರ್ಣ ಯಶಸ್ವಿಗೊಳಿಸಬೇಕು. ಕೇಂದ್ರದ ಮಾದರಿ ಶಾಲೆಗಳ ಯೋಜನೆಯನ್ನು ವಿರೋಧಿಸಬೇಕು. ಇನ್ನುಮುಂದೆ ಒಂದೇ ಒಂದು ಇಂಗ್ಲಿಷ್ ಮಾಧ್ಯಮದ ಶಾಲೆಗೂ ಅನುಮತಿ ನೀಡಕೂಡದು.

೧೫. ಈ ನಾಡಿನ ಜಲಾಶಯಗಳಿಗೆ, ಹೊಸ ವಿಶ್ವವಿದ್ಯಾಲಯಗಳಿಗೆ, ನಗರ ಹಳ್ಳಿಗಳ ಹಾದಿ ಬೀದಿಗಳಿಗೆ ಕನ್ನಡ ಮಹಾಪುರುಷರ, ಮಹಿಳೆಯರ ಹೆಸರುಗಳನ್ನಿಟ್ಟು ಕನ್ನಡ ವಾತಾವರಣ ಕಲ್ಪಿಸಬೇಕು.

ಕನ್ನಡಿಗರು ಯಾರು ಎಂಬ ಬಗೆಗೆ ಸರೋಜಿನಿ ಮಹಿಷಿ ಸಮಿತಿಯ ಶಿಫಾರಸ್ಸನ್ನು ನಮ್ಮ ಗಮನಕ್ಕೆ ತಂದಿದ್ದಾರೆ: "ಈ ನಾಡಿನಲ್ಲಿ ಹುಟ್ಟಿ ಬೆಳೆದವರೆಲ್ಲ, ಇಲ್ಲಿ ಕನಿಷ್ಠ ಹದಿನೈದು ವರ್ಷಗಳಿಂದ ಇದ್ದು ಕನ್ನಡವನ್ನು ಓದಲೂ ಬರೆಯಲೂ, ಕನ್ನಡದಲ್ಲಿ ಮಾತನಾಡಲೂ ಕಲಿತುಕೊಂಡವರೆಲ್ಲ ಕನ್ನಡಿಗರೆಂದು ಗಣಿಸಲ್ಪಡಬೇಕು." ಕನ್ನಡೇತರರನ್ನು ಒಲಿಸಿಕೊಂಡು, ಅವರ ತಾಯ್ನುಡಿಗಳ ಎಲ್ಲ ಬೆಳವಣಿಗೆಗೆ ಅವಕಾಶವಿತ್ತು, ಅವರು ಕನ್ನಡಿಗರಲ್ಲಿ ಒಂದಾಗಿ ಬೆರೆತು ಒಂದಾಗುವಂತೆ ಅವರಿಗೆ ಕನ್ನಡವನ್ನು ಕಲಿಸೋಣ ಎಂಬ ಪುರಾಣಿಕರ ಸಲಹೆ ಯೋಗ್ಯವಾದದ್ದು.

ಅನಂತರ, ಸಮಗ್ರ ಕನ್ನಡ ಸಾಹಿತ್ಯದ ಸಿಂಹಾವಲೋಕನ ಮಾಡುವುದಕ್ಕೆ ಅಧ್ಯಕ್ಷಭಾಷಣದಲ್ಲಿ ಸಾಧ್ಯವಿಲ್ಲವೆಂದು ಹೇಳಿ, ಹಿಂದಿನ ಸಾಹಿತ್ಯದ ನೆನಪಿನಿಂದ ಪ್ರಯೋಜನವಿಲ್ಲವೆಂದೂ ಹೊಸ ಸಾಹಿತ್ಯ ನಿರ್ಮಾಣಕ್ಕೆ ಪರಿಷತ್ತು ಗಮನ ಹರಿಸಬೇಕೆಂದೂ ಹೇಳಿದರು; ೧೯೨೮ರ ಗುಲ್ಬರ್ಗ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಭಾಷಣದಲ್ಲಿ ಬಿ.ಎಂ.ಶ್ರೀ. ಕೊಟ್ಟ ಕರೆಗೆ ಗಮನ ಸೆಳೆದು, ಆಧುನಿಕ ಸಾಹಿತ್ಯ ಸಮೃದ್ಧಿಗೆ ಕಾರಣರಾದ ಹಲವು ಕವಿಗಳ, ಸಾಹಿತಿಗಳ, ಹೆಸರುಗಳನ್ನು ತಿಳಿಸಿ. ಕನ್ನಡಕ್ಕೆ ನಾಲ್ಕು ಜ್ಞಾನಪೀಠ ಪ್ರಶಸ್ತಿಗಳೂ ಇತರ ರಾಷ್ಟ್ರೀಯ ಪ್ರಶಸ್ತಿಗಳೂ ದೊರೆತಿರುವುದನ್ನು ಉಲ್ಲೇಖಿಸಿ, "ನೊಬೆಲ್ ಪುರಸ್ಕಾರಕ್ಕೂ ಅರ್ಹವಾದ ಕೃತಿಗಳಿವೆ ಕನ್ನಡದಲ್ಲಿ" ಎಂದು ಹೆಮ್ಮೆಪಡಬಹುದಾದ ಸಂಗತಿಯನ್ನು ಎತ್ತಿಹೇಳಿದರು.

ಆಧುನಿಕ ಸಾಹಿತ್ಯದ ಈಚಿನ ಬೆಳವಣಿಗೆಗಳಾದ ಪ್ರಗತಿಶೀಲ, ನವ್ಯ, ನವ್ಯೋತ್ತರ, ಸಮನ್ವಯ, ಬಂಡಾಯ, ದಲಿತ, ಇತ್ಯಾದಿ ಆಂದೋಲನಗಳ ಆಶಯ ಪ್ರೇರಣೆ ಧೋರಣೆಗಳನ್ನು ಪೂರ್ವಗ್ರಹವಿಲ್ಲದೆ ಅರಿತುಕೊಳ್ಳಲು ಪ್ರಯತ್ನಿಸಿರುವುದಾಗಿ ಹೇಳಿ, ಈ ಪಂಥಗಳ ಉತ್ತಮ ಕೃತಿಗಳನ್ನು ತಾವು ಆಸಕ್ತಿಯಿಂದ ಓದಿದ್ದೇನೆ ಎಂದು ತಿಳಿಸಿದ್ದಾರೆ ಪುರಾಣಿಕರು. (ಅವುಗಳ ಬಗೆಗೆ ಸಂಕ್ಷೇಪವಾಗಿಯಾದರೂ ತಮ್ಮ ಅಭಿಪ್ರಾಯವನ್ನು ಸೂಚಿಸಿದ್ದರೆ ಚೆನ್ನಾಗಿತ್ತು.) ಅವರ ಈ ನಿಲವು, ಉದಾರ ದೃಷ್ಟಿ, ಅನುಕರಣೀಯ; ಸಾಹಿತ್ಯದ ಬೆಳವಣಿಗೆಗೆ ಅಗತ್ಯ.

ಇಂದಿನ ಸಾಹಿತ್ಯ ಪರಿಸರದಲ್ಲಿ ಅನ್ಯದೂಷಣೆ, ಅವಹೇಳನ ಇಲ್ಲದೆ ಒಂದು ಬಗೆಯ ರಾಜಿಯ, ಸಹಜೀವನದ ವಾತಾವರಣ ಕಂಡುಬರುತ್ತಿದ್ದು, ಸಾರವತ್ತಾದುದು ಎಲ್ಲಿಯೇ ಇದ್ದರೂ ಅದನ್ನು ಗೌರವಿಸುವ ಬುದ್ಧಿ ಬೆಳೆಯುತ್ತಿರುವಂತಿದೆ ಎಂದು ಪುರಾಣಿಕರು ಸಾಹಿತಿಸಮುದಾಯದ ನಾಡಿ ಹಿಡಿದು ನೋಡಲು ಪ್ರಯತ್ನಿಸಿದ್ದಾರೆ. ಅವರು ಗುರುತಿಸಿರುವಂತೆ ಈ ಆರೋಗ್ಯಲಕ್ಷಣ ನಿಜವಾಗಿಯೂ ಇರುವುದಾದರೆ ಅದು ಸಂತೋಷಪಡಬೇಕಾದ ಸಂಗತಿಯೆ.

'ಮುಂದಿನ ದಾರಿ'ಯನ್ನು ಕುರಿತು ತಮ್ಮ ಗಂಭೀರವಾದರೂ ವಿಚಾರ ಪ್ರಚೋದಕ ಶೈಲಿಯಲ್ಲಿ ಇಂದಿನ ರಾಜಕೀಯ, ಆರ್ಥಿಕ, ಸಾಮಾಜಿಕ ವ್ಯವಸ್ಥೆಯ ಬಗೆಗೂ ಕಲಕಿಹೋದ ಅಂತಃಕರಣದಿಂದ ಪುರಾಣಿಕರು ನುಡಿದಿದ್ದಾರೆ. ಅವರ ಕ್ರಾಂತದೃಷ್ಟಿ ಮೆಚ್ಚತಕ್ಕದ್ದು. "ಇವೆಲ್ಲ ಸಾಹಿತ್ಯ ಸಮ್ಮೇಳನದ ವೇದಿಕೆಯಿಂದ ಪ್ರತಿಪಾದಿತವಾಗಲು ತಕ್ಕ ವಿಷಯಗಳೇ ? ಯಾಕಲ್ಲ ?" ಎಂದು ಪ್ರಶ್ನಿಸಿ, "ಹೊಸ ಬಾಳಿಲ್ಲದೆ ಅದೆಂಥ ಹೊಸ ಸಾಹಿತ್ಯ ಹುಟ್ಟೀತು ?" ಎಂಬ ಮರುಪ್ರಶ್ನೆಯನ್ನು ಮುಂದಿಟ್ಟಿದ್ದಾರೆ. "ಹಿತರೂಪವಿದು ಅಹಿತಪ್ರಕಾರವಿದು" ಎಂದು ವಿಶ್ಲೇಷಣೆ ಮಾಡುವ ಸಾಹಿತ್ಯಸೃಷ್ಟಿಗೆ ಕರೆ ಕೊಟ್ಟಿದ್ದಾರೆ. ರಾಜಕೀಯ ಆರ್ಥಿಕ ಸಾಮಾಜಿಕ ವೈಪರೀತ್ಯ ವಿಪರ್ಯಾಸಗಳಿಗೆ ಸ್ಪಂದಿಸುವ, ಜನಜೀವನವನ್ನು ಶುದ್ಧೀಕರಿಸಿ 'ಮಾನವ ಕುಲ' ಒಂದು ಎಂಬ ಸತ್ಯಕ್ಕೆ ಹೊರತಲ್ಲದ ಸಾಹಿತ್ಯ ಮೂಡಬೇಕೆಂಬ ಅವರ ಅಭೀಪ್ಸೆಯನ್ನು ಅಲ್ಲಗಳೆಯುವಂತಿಲ್ಲ. "ಖಡ್ಗಕ್ಕಿಂತ ಲೇಖನಿ ಪ್ರಬಲ", "ಕವಿಗಳು ಅನಧಿಕೃತ ಶಾಸಕರು", "ಲೇಖನಿ ಸಾಹಿತಿಯ ಕೈಯಲ್ಲಿರುವ ಪುಷ್ಪ ಮಾಲಿಕೆ ಮಾತ್ರವಲ್ಲ, ಖಡ್ಗವೂ ಅಹುದು" ಎಂಬ ಪ್ರಸಿದ್ಧ ಸೂಕ್ತಿಗಳ ಬೆಳಕಿನಲ್ಲಿ ರೂಪಗೊಂಡಿವೆ ಪುರಾಣಿಕರ ಭಾಷಣದ 'ಮುಂದಿನ ದಾರಿ' ಎಂಬ ಮುಕ್ತಾಯದ ಭಾಗ. ಜೀವನ ಮತ್ತು ಸಾಹಿತ್ಯಗಳ ಪ್ರಭಾವ ಪಾರಸ್ಪರ್ಯವನ್ನು ಒಪ್ಪಿಕೊಳ್ಳುತ್ತ, ಏನನ್ನೇ ವಸ್ತುವಾಗಿಟ್ಟುಕೊಂಡು ಬರೆದರೂ ಸಾಹಿತ್ಯದ ಮೂಲತತ್ತ್ವಗಳಿಗೆ ಹೊರತಾದ ಬರಹ ಸಾಹಿತ್ಯವಾಗದು, ಸಾಹಿತ್ಯದ ಸೋಗಿನ ಘೋಷಣೆಯೋ ಪ್ರಚಾರಸಾಹಿತ್ಯವೋ ಆಗುತ್ತದೆ ಎಂಬುದನ್ನು ಮರೆಯಬಾರದು.

ಸಾಹಿತ್ಯ ಪರಿಷತ್ತಿನ ವತಿಯಿಂದ ನಡೆಯುವ ಸಮ್ಮೇಳನ ಇದಾದ್ದರಿಂದ ಪರಿಷತ್ತಿನ ಬಗೆಗೂ ಅವರು ನೀಡಿರುವ ಸಲಹೆ ಸೂಚನೆಗಳು ಅಪ್ರಸಕ್ತ ಎನ್ನಲಾಗದು.

ಒಟ್ಟಾರೆ, ಸಿದ್ಧಯ್ಯ ಪುರಾಣಿಕರ ಭಾಷಣ ಸದ್ಯಃಪರಿಸ್ಥಿತಿಯಲ್ಲಿ ಕೇವಲ ಪ್ರಸ್ತುತವಾದದ್ದು ಎನ್ನುವುದರಲ್ಲಿ ಸಂದೇಹವಿಲ್ಲ. ಸಾಹಿತಿ, ಕವಿ ಸಿದ್ಧಯ್ಯ ಪುರಾಣಿಕರು ಹಿಂಬದಿಯಲ್ಲಿದ್ದು ಕನ್ನಡ ಹಿತಚಿಂತಕ ಪುರಾಣಿಕರು ಪ್ರಮುಖವಾಗಿ ಮೆರೆದಿದ್ದಾರೆ ಭಾಷಣದಲ್ಲಿ. ○

## ಶ್ರೀ ಎಚ್. ದೇವೀರಪ್ಪ

ಸಂಚಿಕೆಯ ಪುಟಗಳು ಮುದ್ರಣವಾದಮೇಲೆ ಎರಡು ನಿಧನ ವಾರ್ತೆಗಳನ್ನು ಸೇರಿಸಬೇಕಾಗಿ ಬಂದುದು ದುರ್ದೈವ.

ಶ್ರೀ ಎಚ್. ದೇವೀರಪ್ಪನವರು ಭಾನುವಾರ (3-1-88) ಮಧ್ಯಾಹ್ನ ದಾವಣಗೆರೆಯಲ್ಲಿ ನಿಧನರಾದರು. ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರ ಶಿಷ್ಯರಾದ ಇವರು ಕನ್ನಡ ಎಂ.ಎ. ಪರೀಕ್ಷೆಯನ್ನು ಕೊಟ್ಟಮೇಲೆ ಆಗಿನ ಓರಿಯೆಂಟಲ್ ಲೈಬ್ರರಿಯಲ್ಲಿ ಸಂಶೋಧನ ಸಹಾಯಕರಾಗಿ ಉದ್ಯೋಗಕ್ಕೆ ಸೇರಿ, ಮುಂದೆ ಪ್ರಾಚ್ಯ ಸಂಶೋಧನ ಸಂಸ್ಥೆಯ ನಿರ್ದೇಶಕರಾಗಿ ನಿವೃತ್ತರಾದರು. ಸೃಜನಶೀಲ ಪ್ರತಿಭೆಯುಳ್ಳ ಶ್ರೀ ದೇವೀರಪ್ಪನವರು ಕೆಲವು ಒಳ್ಳೆಯ ಕಥೆಗಳನ್ನು ರಚಿಸಿದ್ದು, 'ಸುವರ್ಣ ಸಂಪುಟ' ಎಂಬ ಸಂಕಲನವಾಗಿ ಅವು ಪ್ರಕಟವಾಗಿವೆ. 'ಬೆಳುವಳದ ಮಡಿಲಲ್ಲಿ' ಎಂಬ ಇವರ ಕಾದಂಬರಿ ಇಂಟರ್‌ಮೀಡಿಯಟ್ ತರಗತಿಗೆ ಪಠ್ಯವಾಗಿದ್ದುದಲ್ಲದೆ ಚಲನಚಿತ್ರವಾಗಿಯೂ ಮೆರೆಯಿತು. 'ಶರಣ ಚರಿತ ಮಾನಸ' ಎಂಬ ಗ್ರಂಥವಲ್ಲದೆ, ಅನೇಕ ಸಂಶೋಧನಾತ್ಮಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಇವು ಈಚೆಗೆ ಪುಸ್ತಕರೂಪದಲ್ಲಿ ಪ್ರಕಟವಾಗಿವೆ. 'ಗಿರಿಜಾ ಕಲ್ಯಾಣ ಸಂಗ್ರಹ'ದಿಂದ ಪ್ರಾರಂಭವಾದ ಇವರ ಗ್ರಂಥ ಸಂಪಾದನ ಪ್ರೌಢಿಮೆ 'ಹರಿಹರನ ರಗಳೆಗಳ' ಸಂಪಾದನೆಯಲ್ಲಿ ಪರಿಣತಿಯನ್ನು ಕಂಡಿತು. ಇವರು ಸಂಪಾದಿಸಿರುವ ನಂಜುಂಡ ಕವಿಯ 'ಕುಮಾರರಾಮಚರಿತೆ' ಗ್ರಂಥಸಂಪಾದನ ಕ್ಷೇತ್ರಕ್ಕೆ ಮೌಲಿಕವಾದ ಕೊಡುಗೆ. ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ಗಾಗಿ ಇವರು ನಿರ್ಮಾಣ ಮಾಡಿರುವ ನಾಲ್ಕು ಸಂಪುಟಗಳ ಹಸ್ತಪ್ರತಿಗಳ ಗ್ರಂಥಸೂಚಿ ಹಸ್ತಪ್ರತಿಶಾಸ್ತ್ರಕ್ಕೆ ಬೆಲೆಬಾಳುವ ಕೊಡುಗೆ. 75 ವರ್ಷ ತುಂಬಿದ ಶ್ರೀ ದೇವೀರಪ್ಪನವರ ನಿಧನದಿಂದ ಸಂಶೋಧನ ಕ್ಷೇತ್ರಕ್ಕೆ ಅಪಾರ ನಷ್ಟವಾಗಿದೆ.

## ತವಗ ಭೀಮಸೇನರಾವ್

85 ವರ್ಷ ವಯೋವೃದ್ಧ, ಕನ್ನಡ ನಾಡು ನುಡಿಗಳ ನಿಷ್ಠಾವಂತ ಸೇವಕ, ತವಗ ಭೀಮಸೇನರಾವ್ ಅವರು ಕಲಬುರ್ಗಿಯಲ್ಲಿ ಶನಿವಾರದಂದು (2-1-1988) ನಿಧನರಾದರು. ಕಲಬುರ್ಗಿಯ ಕನ್ನಡ ಸಾಹಿತ್ಯ ಸಂಘದ ಸಂಸ್ಥಾಪಕರಾಗಿದ್ದ ಶ್ರೀಯುತರು, ಉರ್ದು ಮತ್ತು ಇತರ ಭಾಷೆಗಳ ಪ್ರಭಾವಕ್ಕೆ ಒಳಗಾಗಿದ್ದ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಉಳಿವಿಗೂ ಬಳವಿಗೂ ಮುಂಚೂಣಿಯಲ್ಲಿ ನಿಂತು ಶ್ರಮಿಸಿದ್ದರು. ಕಲಬುರ್ಗಿ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಈ ಕನ್ನಡ ಸೇನಾನಿಯನ್ನು ಮೊನ್ನೆ ಕಲಬುರ್ಗಿಯಲ್ಲಿ ನಡೆದ 58ನೆಯ ಅಖಿಲ ಭಾರತ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಿಸಲಾಯಿತು.

O

# ಮಾನ್ಯ ಸದಸ್ಯರಲ್ಲಿ ವಿಜ್ಞಾಪನೆ

ಲೋಚನ ಚಂದಾದಾರರು ಈವರೆಗೂ ಲೋಚನದ ಚಂದಾ ಮತ್ತು ಪ್ರತಿಷ್ಠಾನದ ಸದಸ್ಯರು ಸದಸ್ಯತ್ವ ಚಂದಾವನ್ನು ಪಾವತಿ ಮಾಡದಿದ್ದರೆ ದಯವಿಟ್ಟು ಆದಷ್ಟು ಬೇಗ ಪಾವತಿ ಮಾಡಬೇಕಾಗಿ ಕೋರಿದೆ. 'ಲೋಚನ' ಚಂದಾ ಅವಧಿ ಪ್ರತಿ ವರ್ಷ ಡಿಸೆಂಬರ್‌ಗೆ ಕೊನೆಗೊಳ್ಳುತ್ತದೆ. ಜನವರಿಯಿಂದ ಮತ್ತೆ 10-00 ರೂ.ಗಳನ್ನು ಪಾವತಿ ಮಾಡಿ ನವೀಕರಿಸಬೇಕು. ಪ್ರತಿಷ್ಠಾನದ ಸದಸ್ಯತ್ವ ಸದಸ್ಯರಾದಂದಿನಿಂದ ಒಂದು ವರ್ಷದವರೆಗೆ ಇರುತ್ತದೆ. ಮತ್ತೆ 25-00 ರೂ. ಗಳನ್ನು ಪಾವತಿ ಮಾಡಿ ನವೀಕರಿಸಬೇಕಾಗುತ್ತದೆ. ಮಾನ್ಯ ಸದಸ್ಯರು ಆಜೀವ ಸದಸ್ಯರಾಗಿ ಪರಿವರ್ತನೆಯಾದರೆ ತುಂಬ ಉಪಕಾರವಾಗುತ್ತದೆ. ಆಜೀವ ಚಂದಾ ಲೋಚನಕ್ಕೆ ರೂ. 100-00, ಪ್ರತಿಷ್ಠಾನಕ್ಕೆ ರೂ. 250-00. ಈ ಮೊತ್ತ ವನ್ನು ಕಂತುಗಳಲ್ಲೂ ಪಾವತಿ ಮಾಡಬಹುದು. ಪ್ರತಿಷ್ಠಾನದ ಸದಸ್ಯರಿಗೆ ಲೋಚನ ಉಚಿತವಾಗಿ ದೊರೆಯುತ್ತದೆ.

ಮಾನ್ಯ ಸದಸ್ಯರು ಕಾಲಕಾಲಕ್ಕೆ ಸದಸ್ಯತ್ವವನ್ನು ನವೀಕರಿಸಬೇಕಾಗಿ ವಿನಂತಿ.

**ಕೆ. ರಾಜಾರಾವ್**
ಕೋಶಾಧಿಕಾರಿ

**ಎಂ. ವಿ. ಸೀತಾರಾಮಯ್ಯ**
ಅಧ್ಯಕ್ಷ

**ಎಂ. ವಿ. ಸತ್ಯನಾರಾಯಣ,**
**ಜಿ. ಎಸ್. ವೆಂಕಟರಾಜು**
ಗೌರವ ಕಾರ್ಯದರ್ಶಿಗಳು

## ಈ ಸಂಚಿಕೆಯ ಲೇಖಕರು

1. **ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರೀ**
ಕನ್ನಡ ಅಧ್ಯಯನ ಸಂಸ್ಥೆ,
ಮಾನಸ ಗಂಗೋತ್ರಿ,
ಮೈಸೂರು–570 006.

2. **ಡಾ|| ನ. ಸುಬ್ರಹ್ಮಣ್ಯ**
274/ಡಿ, 37ನೇ ಕ್ರಾಸ್,
8ನೇ ಬ್ಲಾಕ್, ಜಯನಗರ,
ಬೆಂಗಳೂರು–560 011.

3. **ಪ್ರೊ|| ಆರ್. ಜಿ. ಕುಲಕರ್ಣಿ,**
39/3, 'ಶ್ರೀರಂಗ ನಿಲಯ',
ಟಾಟಾ ಸಿಲ್ಕ್ ಫಾರಂ, 2ನೇ ಮೇನ್,
ಕೆ. ಆರ್. ರಸ್ತೆ,
ಬೆಂಗಳೂರು–560 004.

4. **ಪ್ರೊ|| ಪಿ. ಶ್ರೀಕೃಷ್ಣಭಟ್ಟ,**
'ಶ್ರೀಧಾಮ', ಚಿನ್ಮಯ ಕಾಲೋನಿ,
ವಿದ್ಯಾನಗರ–676123,
ಕಾಸರಗೋಡು ಜಿಲ್ಲೆ.

5. **ಶ್ರೀ ಡಿ. ಶ್ರೀಧರ,**
9, ಕೃಷ್ಣಬೀದಿ,
ಬೆಂಗಳೂರು–560 004.

6. **ಡಾ|| ಕೆ. ಅನಂತರಾಮು,**
414, ದೇವಾಂಬಾ ಅಗ್ರಹಾರ,
ಮೈಸೂರು–570 024.

7. **ಶ್ರೀ ಪಿ. ವಿ. ಕೃಷ್ಣಮೂರ್ತಿ,**
4/5, ಮಾರಮ್ಮನ ಗುಡಿ ಬ್ಲಾಕ್,
ಹಳೇ ಮದ್ರಾಸ್ ರಸ್ತೆ,
ಇಂದಿರಾನಗರ,
ಬೆಂಗಳೂರು–560 038.

## ಇತರ ಪ್ರಕಟನೆಗಳು

(ಇವುಗಳ ಮಾರಾಟದಿಂದ ಬಂದ ಹಣ ಪ್ರತಿಷ್ಠಾನದ ನಿಧಿಗೆ ಸೇರುತ್ತದೆ.)

1. ಅಧ್ಯಯನ (ಡಾ॥ ಶಂ. ಬಾ. ಜೋಶಿ ಅಭಿನಂದನ ಗ್ರಂಥ) 50-00
   (ಡಾ॥ ಶಂ. ಬಾ. ಜೋಶಿ ಅಭಿನಂದನ ಸಮಿತಿ ಕೊಡುಗೆ)
2. ಕವಿಜಿಹ್ವಾಬಂಧನ (ಶ್ರೀಮತಿ ಕೆ. ಶಾಂತ ಅವರ ಕೊಡುಗೆ) 2-00
3. ಆಸ್ವಾದ (ಪ್ರೊ॥ ಎಂ.ವಿ.ಸೀ. ಅಭಿನಂದನ ಗ್ರಂಥ) 75-00
4. ಕಾಣಿಕೆ (ಕವನ ಸಂಕಲನ) 5-00
5. ಹಳೆ ಬೇರು ಹೊಸ ಚಿಗುರು (ಕವನ ಸಂಕಲನ) 5-00
6. ಪಟ್ಟಬಂಧ (ನಾಟಕ) ವಿ. ಸೀ. 6-00
7. ಪ್ರೊ॥ ಎಂ.ವಿ.ಸೀ. ಅವರ ಪುಸ್ತಕಗಳು :
   [ಸೆಟ್ ಪುಸ್ತಕ ಕೊಂಡರೆ 35-00]
   1. ಕವಿಯ ಹೆಂಡತಿ (ನಾಟಕ) 2-00
   2. ಸ್ವಯಂವರ (ನಾಟಕ) 2-00
   3. ಸ್ನೇಹದ ಕಾಣಿಕೆ (ಕಾದಂಬರಿ) 3-00
   4. ಕನ್ನಡಮ್ಮನ ಕೊರಗು 8-00
   5. ಹೊಸಗನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು 5-00
   6. ರಾಘವ ಕವನ ಕೋಶ (7, 8, 9ರ ಕವನಗಳ ಸಂಗ್ರಹ) 20-00
   7. ಗೀತಭಾರತಿ 5-00
   8. ಹಂಸಪಥ 10-00
   9. ಮುಗಿಯದ ಮಾಯೆ 5-00
   10. ನಿಲ್ದಾಣಗಳ ನಡುವೆ (ಕಥಾಸಂಗ್ರಹ) 20-00
   [ಸೆಟ್‌ಗೆ 6 ಅಥವಾ 7, 8, 9ನ್ನು ಕೊಡಲಾಗುತ್ತದೆ]
8. ನಾಡೋಜ ಬಿ.ಎಂ.ಶ್ರೀ. 5-00

### ಸಿದ್ಧತೆಯಲ್ಲಿ

1. ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ (ಅಚ್ಚಿನಲ್ಲಿ)
2. ಶ್ರೀ ಕೃಷ್ಣಬಾಲಲೀಲೆ : ಭಾಗ 2 (ಅಚ್ಚಿನಲ್ಲಿ)
   (ತಿಮ್ಮಪ್ಪದಾಸರ ಕೀರ್ತನ ರೂಪದ ಭಾಗವತ ಗ್ರಂಥ)
3. ರಸಮಂಜರಿ (ಜಾಯೇಂದ್ರನ ಲಕ್ಷಣ ಗ್ರಂಥ)
4. ಕುಮಾರವ್ಯಾಸ ಭಾರತ ಸಂಗ್ರಹ (ಬಿ.ಎಂ.ಶ್ರೀ. ಮತ್ತು ಟಿ.ಎಸ್.ವೆಂ. ಸಂಪಾದಿಸಿದ್ದ ಪ್ರತಿಯನ್ನು ಆಧರಿಸಿದ್ದು)

**ಲೋಚನ** (ಷಾಣ್ಮಾಸಿಕ ವಿದ್ವತ್ ಪತ್ರಿಕೆ) ಬಿಡಿ ಪ್ರತಿ ರೂ. 6-00
ಪ್ರತಿಷ್ಠಾನದ ಸದಸ್ಯರಿಗೆ ಉಚಿತ. ವಾರ್ಷಿಕ ಚಂದಾ 10-00
ಆಜೀವ 100-00

ಪ್ರತಿಷ್ಠಾನದ ಸದಸ್ಯತ್ವ : ವಾರ್ಷಿಕ ರೂ. 25. ಆಜೀವ ರೂ. 250.
ಸಹೃದಯ ಗೋಷ್ಠಿ ಸದಸ್ಯತ್ವ: ವಾರ್ಷಿಕ ರೂ. 10. ಆಜೀವ ರೂ. 100.

